

# ಸಪ್ತಗಿರಿ

'ಗಸ್ಟ್ 1988

ಬೆಲೆ : ರೂ ೧

ತಿರುಮಲ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಶ್ರೀ ರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ಸರ್ವದ
ಪಾರ ಮಹಿಮೋದಾರ ಸದ್ಗುಣ ಪೂರ್ಣ ಗಂಭೀರ
ಸಾರಿದವರಘ ದೂರಗೈಸೀ
ಸೂರಿಜನರಿಗೆ ಸೌಖ್ಯನೀಡುವ
ಧೀರ ವೆಂಕಟರಮಣ ಕರುಣದಿ ಪೊರೆಯೊ ನೀಯೆನ್ನ –1–

ಘನ್ನ ಮಹಿಮಾಪನ್ನ ಪಾಲಕ
ನಿನ್ನ ಹೊರತಿನ್ನನ್ಯ ದೇವರ
ಮನ್ನದಲಿ ನೆನೆಸನೆಂದಿಗು ಬನ್ನ ಬಡಿಸದಿರು।
ಎನ್ನ ಪಾಲಕ ನೀನೆ ಇರುತಿರೆ
ಇನ್ನು ಭವಭಯ ವೇಕೆ ಎಂಬುವೆ
ಚೆನ್ನ ವೆಂಕಟರಮಣ ಕರುಣದಿ ಪೊರೆಯೊ ನೀಯೆನ್ನ –2–

–ಶ್ರೀ ಗುರುಜಗನ್ನಾಥದಾಸರು.

(ಶ್ರೀ ವೆಂಕಟೇಶ ಸ್ತವರಾಜದಿಂದ)

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ



### ವಾರ್ಷಿಕ ಬ್ರಹ್ಮೋತ್ಸವಗಳು 13–9–88 ರಿಂದ 22–9–88 ವರೆಗೆ

| | | | |
|---|---|---|---|
| 13–9–88 | ಮಂಗಳವಾರ | | ಅಂಕುರಾರ್ಪಣೆ |
| 14–9–88 | ಬುಧವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 15–9–88 | ಗುರುವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 16–9–88 | ಶುಕ್ರವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ |
| 17–9–88 | ಶನಿವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 18–9–88 | ಭಾನುವಾರ | ಮೋಹಿನೀ ಅವತಾರ | ಗರುಡವಾಹನ |
| 19–9–88 | ಸೋಮವಾರ | ಹನುಮದ್ವಾಹನ, ಸಂಜೆ–ವಸಂತೋತ್ಸವ | ಗಜವಾಹನ |
| 20–9–88 | ಮಂಗಳವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 21–9–88 | ಬುಧವಾರ | ರಥೋತ್ಸವ | ಅಶ್ವವಾಹನ |
| 22–9–88 | ಗುರುವಾರ | ಅವಭೃಥೋತ್ಸವ | ಧ್ವಜಾವರೋಹಣ. |

ಸೂಚನೆ:– ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿನಿತ್ಯ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ವಿವರಗಳಿಗಾಗಿ ನಿಮ್ಮ ಬಳಿಯ ತಿ. ತಿ. ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

**ತಿ. ತಿ. ದೇ.**





ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥


**ಸಂಪುಟ ೧೯] ಆಗಸ್ಟ್ ೧೯೮೮ [ಸಂಚಿಕೆ ೩**


# ವಿಷಯಸೂಚಿ



ಮುಖಚಿತ್ರ : ಶ್ರೀಲಕ್ಷ್ಮೀ – ಚಿತ್ರ : ಕೆ. ಜಗದೀಶ್.

ಹಿಂಬದಿಯಲ್ಲಿ : ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರ ಕೋಟಿ ಕುಂಕುಮಾರ್ಚನೆ

ಒಳಗಡೆ : 1 ತಿರುಮಲೆಯಲ್ಲಿ ಉಪರಾಷ್ಟ್ರಪತಿ ಡಾ॥ ಶಂಕರದಯಾಳಶರ್ಮಾ ದಂಪತಿಗಳು 2 ತಿರುಮಲೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಟಿ ರಾಮರಾವ್.

# ಸಂಪಾದಕೀಯ

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯನ್ನು ಸರ್ವ ಮಂಗಳೆಯೆಂದು ಗೌರವಿಸಲಾಗುತ್ತದೆ. ಮಾತೃ ಪೂಜೆಯು ಎಲ್ಲ ಸಂಸ್ಕೃತಿಗಳಲ್ಲೂ ಕಂಡು ಬರುವ ಅಂಶವೇ ಆದರೂ ಭಾರತೀಯರು ತಮ್ಮ ದೈನಂದಿನ ಜೀವನದಲ್ಲೂ ಈ ತತ್ತ್ವವನ್ನು ಅನೂಚಾನವಾಗಿ ಆಚರಣೆಯಲ್ಲಿ ತಂದಿರುವುದನ್ನು ಕಾಣಬಹುದು.

ಭಾರತೀಯರಲ್ಲಿ ಬ್ರಹ್ಮ ವಿಷ್ಣು ಶಿವರೆಂದು ತ್ರಿಮೂರ್ತಿ ದೈವಕಲ್ಪನೆಯಿದ್ದರೂ ವೈಷ್ಣವ, ಶೈವ, ಶಾಕ್ತ ಪೂಜಾಪದ್ಧತಿಗಳಿವೆ. ಶಕ್ತ್ಯಾರಾಧನೆಯಲ್ಲಿ ತ್ರಿಮೂರ್ತಿಗಳ ಗುಣ ಒಂದಾಗಿರುವುದನ್ನು ಕಾಣಬಹುದು. ಆಕೆಯನ್ನು ಮಹಾಲಕ್ಷ್ಮಿ ಮಹಾಸರಸ್ವತಿ ಮಹಾಕಾಳಿ ಎಂದು ವಿವಿಧ ರೂಪಗಳಲ್ಲಿ ಗುರುತಿಸಲಾಗಿದೆ. ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಆಕೆಯನ್ನು ಪೂಜಿಸುವುದುಂಟಾದರೂ, ಅವರವರ ಭಾವಕ್ಕೆ ಅವರವರ ವೇಷಕ್ಕೆ ತಕ್ಕಂತೆ ತೋರುವ ಆದಿಗುರುದೈವ ಆಕೆನೇ ಎಂಬಂತೆ ಆಕೆಯೇ ಎನ್ನಲೂ ಅಡ್ಡಿಯಿಲ್ಲ.

ಈ ಹಿನ್ನೆಲೆಯಲ್ಲಿ ಲಕ್ಷ್ಮೀಪೂಜೆಯ ಮಹತ್ತ್ವವನ್ನು ತಿಳಿಯಬಹುದು. ಲಕ್ಷ್ಮೀ ಎಂದರೆ ಸಂಪತ್ತು, ಶುಭ ಮಂಗಳ, ಒಳಿತು, ಸುಂದರ ಎಂದೆಲ್ಲ ಹೇಳುತ್ತ – ಎಲ್ಲ ಸುಗುಣಗಳ ಸಗುಣಾರಾಧನೆಗೆ ಲಕ್ಷ್ಮೀಪೂಜೆ ಎಂದು ಹೇಳಬಹುದು. ಈ ಗುಣಗಣವನ್ನು ಸ್ತ್ರೀರೂಪದಲ್ಲಿ ಕಂಡುಕೊಂಡರು. ಆಕೆ ಸಾಗರಸುತೆ ಎಂದರು ಅಮೇಯತೆಯಿಂದ, ಅಗಾಧತೆಯಿಂದ, ಅಪಾರದಿಂದ ಹೊರಹೊಮ್ಮಿದ ಇದೇ ಗುಣಗಳ ಸಂಕೇತವಾಗಿ, ಅತ್ಯತಿಷ್ಠದ್ದಶಾಂಗುಲದ–ವಿಷ್ಣುವಿನ–ವಕ್ಷಸ್ಥಲವನ್ನು ಸೇರಿದವಳು. ಪೂರ್ಣದಿಂದ ಹೊರಬಂದು ಪೂರ್ಣವನ್ನು ಸೇರಿದ ಪೂರ್ಣತೆ ಎಂದು ಭಾವಿಸಲು ಅವಕಾಶವಿದೆ.

ಲಕ್ಷ್ಮೀಪೂಜೆ ಮಾಡುವುದು ಕೇವಲ ಐಹಿಕ ಸಂಪದಭಿವೃದ್ಧಿಗಾಗಿ ಮಾತ್ರವೇನಲ್ಲ, ಆಧ್ಯಾತ್ಮಿಕ ಆನಂದಾಭಿವೃದ್ಧಿಗಾಗಿಯೂ ಹೌದು. ಸುಖ, ಸೌಹಾರ್ದ ಶಾಂತಿಗಳ ಪ್ರಸಾರಕ್ಕಾಗಿ, ತನ್ಮೂಲಕ ಇಹಜೀವನದ ನೆಮ್ಮದಿಗಾಗಿಯೂ ಲಕ್ಷ್ಮೀಪೂಜೆ ಅಗತ್ಯ

ಪೂಜೆ ಎನ್ನುವುದೇ ಒಂದು ಹಿರಿತತ್ತ್ವದಲ್ಲಿ ನೆಲೆಸಿದ ಮನದಸ್ಥಿತಿಯ ಪ್ರಕಟಾವಸ್ಥೆ, ಒಂದುಹಿರಿಯ ಆದರ್ಶದ ಅನುಸರಣೆಯ ಪ್ರಯತ್ನದ ಒಂದು ಸಂಕೇತ–ಎಂದಾಗ ಲಕ್ಷ್ಮೀಪೂಜೆಯ ಅರ್ಥ ಹೆಚ್ಚು ಸ್ಫುಟವಾಗುತ್ತದೆ.

ಭಾರತದ-ಜಗತ್ತಿನ–ಇಂದಿನ ಪರಿಸ್ಥಿತಿಯಲ್ಲಿ ಮಾನವೀಯ ಮೌಲ್ಯಗಳ ಪ್ರಸಾರ, ಪರಿರಕ್ಷಣೆಗಳಿಗೆ, ಶಾಂತಿ ಸೌಹಾರ್ದಗಳ ಪ್ರಸಾರಕ್ಕೆ ಪ್ರಯತ್ನ ಪಡಬೇಕಾದ್ದು ಅಗತ್ಯವಾಗಿದೆ. ಇಂತಲ್ಲಿ ಮಾತೃದೇವೋಭವ ಎಂದು ಹೇಳುವ ಹಾಡುವ ನಡೆಯುವ ನಾವು ಭಾರತೀಯರು ಸಾಧಿಸಬಹುದಾದ್ದು ಹೆಚ್ಚು ಅರ್ಥಪೂರ್ಣ. ವರಲಕ್ಷ್ಮೀ ವ್ರತದಂದು ಲಕ್ಷ್ಮಿಯ – ಎಲ್ಲ ಸುಗುಣಗಳ ಆರಾಧನೆ ವ್ಯಾಪಕವಾಗಿ ನಡೆಯುವಂತಾಗಲಿ ಎಂದು–ಹಾರೈಸುವ.

# ಶ್ರೀ ಲಕ್ಷ್ಮೀ

ಸಾಗರ ಕನ್ಯೆಯಾದ ಲಕ್ಷ್ಮಿಯು ವಿಷ್ಣು ವಲ್ಲಭೆ ಎಂದೆನಿಸಿಕೊಂಡಿದ್ದಾಳೆ ದೇವ ದಾನವರಿಬ್ಬರೂ ಕೂಡಿಕೊಂಡು ಕ್ಷೀರ ಸಾಗರ ಮಂಥನ ಕಾರ್ಯವನ್ನಾರಂಭಿಸಿದಾಗ ಈ ತಾಯಿ ಕಾಣಿಸಿಕೊಂಡಳು. ಎಲ್ಲರ ಗಮನವನ್ನು ಸೆಳೆದಳು. ದೇವ, ದೈತ್ಯ, ಯಕ್ಷ, ಗಂಧರ್ವ, ಋಷಿ ಮುನಿಗಳೂ ಅವಳ ರೂಪ ಲಾವಣ್ಯಗಳನ್ನು ಕಂಡು ಬೆರಗಾಗಿ ಹೋದರು. ಅವಳ ದಂತಪಂಕ್ತಿ ಪದ್ಮರಾಗಮಣಿಯಂತಿದ್ದಿತು. ಅವಳ ನಗೆಯಂತೂ ರತ್ನದ ಹಾಸಿಗೆ ಹಾಸಿದಂತೆ ತೋರುತ್ತಿತ್ತು. ಹೆಜ್ಜೆ ಹೆಜ್ಜೆಗೂ ಬಂಗಾರದ ಹಾಸಿಗೆ ಹಾಸಿದಂತೆ ತೋರುತ್ತಿತ್ತು. ಅವಳನ್ನು ಕಾಣುತ್ತಿದ್ದಂತೆ ದೇವತೆಗಳ ದಾತೃತ್ವವೇ ಸಡಿಲಾಯಿತು. ಮೊದಲು ತಂದೆಯಾದ ಸಮುದ್ರರಾಜನು ಅವಳಿಗೆ ರೇಶಿಮೆಯ ವಸ್ತ್ರವನ್ನಿತ್ತ. ವರುಣನು ವೈಜಯಂತೀ ಮಾಲೆಯನ್ನಿತ್ತರೆ, ವಿಶ್ವಕರ್ಮನು ನಾನಾ ತರಹದ ಆಭರಣಗಳನ್ನು ಕೊಟ್ಟ. ಸ್ವತಃ ಸರಸ್ವತೀದೇವಿಯು ತನ್ನ ಕಂಠಾಭರಣವನ್ನು ತೆಗೆದು ಅವಳಿಗೆ ತೊಡಿಸಿದಳು. ಆಗಂತೂ ಲಕ್ಷ್ಮೀ ಹಾಗೂ ಸರಸ್ವತಿಯರಿಬ್ಬರಲ್ಲಿಯೂ ಭಿನ್ನಾಭಿಪ್ರಾಯಗಳಿರಲಿಲ್ಲ ಹೀಗೆ ನಾನಾ ದೇವತೆಗಳಿಂದ ಕೊಡಲ್ಪಟ್ಟ ಆಭರಣಗಳಿಂದ ಶೃಂಗಾರಗೊಂಡಾಗ ನಾಗರು ಅವಳಿಗೆ ಕರ್ಣಾಭರಣವನ್ನು ಕೊಡಮಾಡಿದರು. ನಂತರ ಆ ದೇವಿಯನ್ನು ಋಷಿ ಮುನಿಗಳು ನಾನಾ ರೀತಿಯಲ್ಲಿ ಸ್ತೋತ್ರವನ್ನು ಮಾಡಿದರು.

ಕಾಂಸೋಸ್ಮಿತಾಂ ಹಿರಣ್ಯಪ್ರಾಕಾರ
ಮಾರ್ದ್ರಾಂ
ಜ್ವಲಂತೀಂ ತೃಪ್ತಾಂ ತರ್ಪಯಂತೀಮ್
ಪದ್ಮೇಸ್ಥಿತಾಂ ಪದ್ಮವರ್ಣಾಂ
ತಾಮಿ ಹೋಪಹ್ವಯೇ ಶ್ರಿಯಮ್

ನೀನು ಸಾಕ್ಷಾತ್ ಬ್ರಹ್ಮಸ್ವರೂಪಿಣಿಯಾಗಿರುವೆ. ಸದಾ ಮುಗುಳುನಗೆಯಿಂದ ಕೂಡಿದವಳಾಗಿರುವೆ. ದಿವ್ಯಮಂಟಪದಲ್ಲಿ ವಿರಾಜಮಾನಳಾಗಿರುವೆ. ನೀನು ದಯಾರ್ದ್ರ ಹೃದಯಳು. ಭಕ್ತರ ಸೇವೆಯಿಂದ ತೃಪ್ತಳಾದವಳು. ಪದ್ಮವರ್ಣಯುಕ್ತಳು. ಶ್ರೀದೇವಿಯೂ ಆದ ನಿನ್ನನ್ನು ಆಹ್ವಾನಿಸುವೆವು.

ಚಂದ್ರಾಂ ಪ್ರಭಾಸಾಂ ಯಶಸಾಂ
ಜ್ವಲಂತೀಂ
ಶ್ರಿಯಂ ಲೋಕೇ ದೇವಜುಷ್ಟಾ
ಮುದಾರಾಮ್
ತಾಂ ಪದ್ಮನೇಮೀಂ ಶರಣ ಮಹಂ
ಪ್ರಪದ್ಯೇऽ
ಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ

ಅತ್ಯಂತ ಆನಂದ ಸ್ವರೂಪಳೂ, ಪ್ರಕಾಶಮಾನಳೂ, ಯಶಸ್ಸಿನಿಂದ ಪ್ರಜ್ವಲಿಸುವವಳೂ, ತ್ರಿಲೋಕದ ದೇವತೆಗಳಿಂದ ಪೂಜೆಗೊಳ್ಳುವವಳೂ, ಉದಾರಳೂ, ಕೈಯಲ್ಲಿ ಪದ್ಮ ಧರಿಸಿದವಳೂ, ಆದ ಸರ್ವೇಶ್ವರೀ, ಹೇ ದೇವಿ, ನಿನ್ನನ್ನು ಪ್ರಾರ್ಥಿಸುವೆ.



ಸಮುದ್ರಗರ್ಭದಿಂದ ಹೊರಬಂದ ಇವಳಿಗೆ ತಕ್ಷಣವೇ ಸ್ವಯಂವರದ ಏರ್ಪಾಟಾಗಬೇಕಿತ್ತು. ಆದುದರಿಂದ ಅಲ್ಲಿ ಮಿಳಿತರಾದವರಲ್ಲಿ ತನಗೆ ಯೋಗ್ಯರಾದವರಾರು? ಎಂದು ಅವಳು ಅರಸತೊಡಗಿದಳು. ಋಷಿ ಮಂಡಲವಂತೂ ಅವಳ ಮುಂಭಾಗದಲ್ಲಿತ್ತು. ಇಂದು ನಾನಾರೀತಿಯಲ್ಲಿ ಸ್ತೋತ್ರಮಾಡಿದ ಇವರು ಒಂದುವೇಳೆ ಕೋಪಗೊಂಡರೆ ಶಾಪವನ್ನೂ ಕೊಡಬಹುದು. ಆದುದರಿಂದ ಇಂಥವರ ಸಹವಾಸವೇ ಬೇಡ ಎಂದು ಮುನ್ನಡೆದಳು. ಮಹಾಜ್ಞಾನಿಗಳಾಗಿದ್ದ ಶುಕ್ರಾಚಾರ್ಯರೂ ಸಹ ಆ ಗುಂಪಿನಲ್ಲಿದ್ದರು. ಅವರ ಅಂತರಂಗದ ಆಸಕ್ತಿಯು ಮಾತ್ರ ಅವಳಿಗೆ ಸರಿಬರಲಿಲ್ಲ. ಶಂಕರನಿಗೆ ಆಯುರ್ಮರ್ಯಾದೆಯ ಸೀಮೆಯೇ ಇರಲಿಲ್ಲ. ಆತನು ಸದಾ ಸ್ಮಶಾನವಾಸಿ. ಹೀಗೆ ವಿಚಾರ ಮಾಡುತ್ತ ಸಾಗಿದಾಗ ಅವಳನ್ನು ವರಿಸಲು ನಾ ಮುಂದು ತಾ ಮುಂದು ಎಂಬ ರೀತಿಯಲ್ಲಿ ಸ್ಪರ್ಧೆಯೇ ಆರಂಭವಾಯಿತು. ಕೊನೆಗೆ ಆ ದೇವಿಯು ಸಕಲಗುಣ ಪರಿಪೂರ್ಣನಾದ ವೈಕುಂಠಪತಿಯೇ ತನಗೆ ಯೋಗ್ಯನಾದ ವರ ಎಂದು ತೀರ್ಮಾನಿಸಿದಳು. ಆತನ ಕೊರಳಿಗೆ ವರಮಾಲೆಯನ್ನು ಹಾಕಿದಳು. ಆಗ ನಾರಾಯಣನು ತನ್ನ ಹೃದಯದಲ್ಲಿಯೇ ಅವಳಿಗೆ ಸ್ಥಳವನ್ನಿತ್ತ. ಇದರಿಂದಾಗಿ ಅವಳು ಸದಾಕಾಲ ವಿಷ್ಣುವಿನ ಹೃದಯದಲ್ಲಿಯೇ ಕಾಣಿಸಿಕೊಳ್ಳುವಂತಾದಳು. ಅವಳ ರಂಗುರಂಗಿನ ಮೋಹಕ ರೂಪವನ್ನು ಕಂಡು ಕವಿಗಳ ಹೃದಯವು ಭಾವಪರವಶವಾಗಿ ಹರಿಯತೊಡಗಿತು.

ಶ್ರೀ ಆದ್ಯರಾಮಾಚಾರ್ಯ

ನೀಲಕಮಲದಲ್ಲಿ ಹೇಗೆ ಕೇಸರಿ ವರ್ಣ ರಜನೆಯೋ, ಬಂಡೆಗಳ ಗರ್ಭದಲ್ಲಿ ಹೇಗೆ ಬಂಗಾರದ ಬಳೆಗಳೋ, ಮೇಘ ಮಂಡಲದಲ್ಲಿ ಹೇಗೆ ಸೌದಾಮಿನಿಯೋ ಹಾಗೆ ನೀನು ವಿಷ್ಣುವಿನ ಹೃದಯದಲ್ಲಿ ವಿರಾಜಮಾನಳಾಗಿರುವೆ. ಹೇ ಮಾತೇ ನೀನು ನಮ್ಮನ್ನು ರಕ್ಷಿಸು—ಎಂದು ಕೃತಿರಚನೆಗೈದು ಹಾಡಲಾರಂಭಿಸಿದರು.

ವೇರೂಳ ದೇವಾಲಯದ ಪ್ರವೇಶದ್ವಾರದಲ್ಲಿ ಗಜಲಕ್ಷ್ಮಿಯ ದರ್ಶನವು ಲಭಿಸುತ್ತದೆ. ಕ್ಷೀರಸಾಗರದಲ್ಲಿ ಸಾವಿರ ಕಮಲಗಳುಳ್ಳ ಕಮಲಮಧ್ಯದಲ್ಲಿ ಅವಳು ವಿರಾಜಮಾನಳಾಗಿದ್ದಾಳೆ. ಅವಳ ಎಡಬಲಗಳಲ್ಲಿ ಆನೆಗಳಿವೆ. ಅವು ತಮ್ಮ ಸೊಂಡಿಲಿನಲ್ಲಿ ಕುಂಭ ಹಿಡಿದು ಆ ತಾಯಿಗೆ ಅಭಿಷೇಕ ಮಾಡುತ್ತಿವೆ.

ಲಕ್ಷ್ಮಿಗೆ ಶ್ರೀ ಎಂಬ ಇನ್ನೊಂದು ಹೆಸರೂ ಇದೆ. ಹಿಂದು ರೀತಿಯಲ್ಲಿ ಎರಡೂ ಒಂದೇ ಶಬ್ದಗಳೆನ್ನಬಹುದು. ಇವರಲ್ಲಿಯ ಶ್ರೀ ಎಂಬ ಪದವು ಅತಿ ಪ್ರಾಚೀನ, ಲಕ್ಷ್ಮೀ ಎಂಬುದು ಅವಳಿಗೆ ದೊರೆತ ಮನ್ನಣೆಯ ಹೆಸರು.ವೇದಕಾಲದಲ್ಲಿಶೋಭೆ, ಸೌಂದರ್ಯ ಇವುಗಳ ವಿಚಾರವಾಗಿ ಶ್ರೀ ಎಂಬ ಹೆಸರೇ ಬಳಕೆಯಲ್ಲಿದೆ. ಯಾವುದು ಮಂಗಲ ಕಾರಕವೋ, ಶಾಂತಿಕಾರಕವೋ ಅದನ್ನು ಶ್ರೀರ (ಶ್ಲೀಲ) ಎಂಬ ಶಬ್ದದಿಂದ ಕರೆಯುತ್ತಾರೆ. ಹಿಂದಿನ ಕಾಲದಲ್ಲಿ ಶ್ರೀ ಎಂಬುದು ಮೂರ್ತಿರೂಪದಲ್ಲಿರಲಿಲ್ಲ. ಅವಳು ಕೇವಲ ಭಾವನಾತ್ಮಕವಾಗಿ ಲಭಿಸುತ್ತಿದ್ದಳು. ಕಾಲಾಂತರದಲ್ಲಿ ಅವಳಿಗೆ ಮೂರ್ತಿಯ ಸ್ವರೂಪವು ಬಂದಿತು. ಶತಪಥ ಬ್ರಾಹ್ಮಣದಲ್ಲಿ ಈ ವಿಚಾರವನ್ನು ಕುರಿತು ಒಂದು ಕಥೆ ಇದೆ. ಪ್ರಜಾಪತಿಯು ತಪೋನಿರತನಾಗಿದ್ದ. ಆತನ ತಪಃಪ್ರಭಾವದಿಂದ ದೇದೀಪ್ಯಮಾನವಾದ ರೀತಿಯಲ್ಲಿ ಶ್ರೀದೇವಿಯು ಹೊರ ಬಂದಳು. ಈ ಮಾತಿನ ಅಂತರಾರ್ಥವೆಂದರೆ ವೈದಿಕರ ಮನದಲ್ಲಿ ಇವಳು ಭಾವನಾ ರೂಪದಲ್ಲಿ ಜನ್ಮವನ್ನು ತಾಳಿದಳು.

ಈ ದೇಶದಲ್ಲಿ ವೈದಿಕ ಸಂಸ್ಕೃತಿ ಎಂದರೆ ಸಿಂಧೂ ಸಂಸ್ಕೃತಿ. ಆ ಕಾಲದಲ್ಲಿ ಮಾತೃ ಪೂಜೆಗೆ ಪ್ರಾಧಾನ್ಯವಿತ್ತು. ಮಾತೆ ಎಂದರೆ ಮಹಾಮಾಯೆ. ಇವಳೇ ಸಿಂಧೂ ಸಂಸ್ಕೃತಿಯ ಪ್ರಧಾನದೇವತೆ, ಮುಂದೆ ಯಾವುದೋ ಕಾಲದಲ್ಲಿ ಶ್ರೀರೂಪ ಹಾಗೂ ಮಾತೃ ದೇವತೆ ಇವರಿಬ್ಬರ ಹೊಂದುಗೂಡುವಿಕೆಯೇ ಲಕ್ಷ್ಮಿಯ ರೂಪವಾಗಿರಬಹುದೆನಿಸುತ್ತದೆ. ಯಾವ ಯಾವ ಸಂದರ್ಭದಲ್ಲಿ ವಿಶ್ವದೊಂದಿಗೆ ಇವಳ ಸಂಬಂಧವು ಬಂದಿದೆಯೋ ಆಗೆಲ್ಲ ಸಹಸ್ರಸ್ತನಗಳಿಂದ ಹಾಲು ಧಾರೆ ಧಾರೆಯಾಗಿ ಹರಿದ ವರ್ಣನೆಯನ್ನು ನಾವು ಕಾಣಬಹುದಾಗಿದೆ.

ಭಾರತದ ಇತಿಹಾಸದಲ್ಲಿ ಗುಪ್ತರಕಾಲವು ಪುರಾಣಗಳಿಗೆಲ್ಲ ಉತ್ಕರ್ಷ ಕಾಲವೆನಿಸಿದೆ. ಈ ಕಾಲದಲ್ಲ ಲಕ್ಷ್ಮಿಯ ಪೂಜೆ ವಿಶೇಷ ರೀತಿಯಲ್ಲಿ ನಡೆಯದು ಕಾಣಸಿಗುತ್ತದೆ. ಗುಪ್ತರಿಗೆ ತಮ್ಮ ರಾಜ್ಯವನ್ನು ವಿಸ್ತರಿಸಬೇಕಾಗಿತ್ತು. ಉತ್ಪಾದನೆ ಹಾಗೂ ವ್ಯಾಪಾರಗಳಿಂದ ತಮ್ಮ ಸಂಪತ್ತನ್ನು ಬೆಳೆಸಿಕೊಳ್ಳಬೇಕಾಗಿತ್ತು. ಸಾಹಿತ್ಯ ಲಲಿತ ಕಲೆ ಅಷ್ಟೇ ಅಲ್ಲ ಜೀವನದ ಎಲ್ಲ ವಿಧಾನಗಳಲ್ಲಿ ಸಮೃದ್ಧಿಯನ್ನು ಕಂಡುಕೊಳ್ಳಬೇಕಾಗಿತ್ತು. ಆದುದರಿಂದ ಆ ಕಾಲದ ರಾಜರೆಲ್ಲ ಲಕ್ಷ್ಮಿಯ ಉಪಾಸಕರಾಗಿದ್ದರು. ಉಜ್ಜಯನಿಯಲ್ಲಿ ದೊರೆತಿರುವ ರಾಜಮುದ್ರೆಗಳಲ್ಲಿ ಲಕ್ಷ್ಮಿಯ ಚಿತ್ರವಿದೆ. ಬೌದ್ಧರ ಕಾಲದಲ್ಲ ಮಾತ್ರ ಲಕ್ಷ್ಮಿಯ ವಿಚಾರವಾಗಿ ವಿಶೇಷ ಆದರವಿದ್ದಂತೆ ತೋರಿ ಬರುವುದಿಲ್ಲ.

ದಕ್ಷಿಣದಲ್ಲಿರುವ ಮಹಾಬಲಿಪುರಂ ಎಂಬ ಸ್ಥಳದಲ್ಲಿ ಸಾವಿರಕಮಲದ ಮೇಲಿರುವ ಲಕ್ಷ್ಮಿಯ ವಿಗ್ರಹವನ್ನು ಚಿತ್ರಿಸಲಾಗಿದೆ ಇನ್ನು ರಾಜಾ ರವಿವರ್ಮರಿಂದ ರಚಿತವಾದ ಚಿತ್ರಗಳಲ್ಲೆಲ್ಲ ಕಮಲಾಸನಸ್ಥಳಾದ ಲಕ್ಷ್ಮಿಯನ್ನೇ ಕಾಣುವಂತೆ ಮಾಡಿದ್ದಾರೆ. ಇನ್ನು ಆಧುನಿಕ ಚಿತ್ರಕಾರರಲ್ಲೊಬ್ಬರೆನಿಸಿರುವ ಶ್ರೀ ಸುನೀಲಪಾಲರಿಂದ ಬಿಡಿಸಲ್ಪಟ್ಟ ಲಕ್ಷ್ಮಿಯ ಚಿತ್ರವು ಮಾತ್ರ ಭಾರತದ ಶ್ರೀಮಂತಿಕೆಯ ದ್ಯೋತಕವೆನಿಸುತ್ತವೆ. ಇವೆಲ್ಲವನ್ನು ಅಭ್ಯಾಸಮಾಡಿದಾಗ ಗಜಲಕ್ಷ್ಮಿಯು ಈಗ ಸ್ವಲ್ಪಮಟ್ಟಿಗೆ ಹಿಂದುಳಿದಂತೆ ಭಾಸವಾಗುತ್ತದೆ. ಇನ್ನುಮುಂದೆ ಗ್ರಾಮಲಕ್ಷ್ಮಿಯ ವಿಚಾರದಲ್ಲಿ ಹೆಚ್ಚಿನ ಆದರಗಳು ಈಗ ಕಾಣಬರತೊಡಗಿವೆ.

ಕ್ಷೀರಸಾಗರವು ಲಕ್ಷ್ಮೀದೇವಿಯ ತವರುಮನೆಯಾದರೆ ವೈಕುಂಠವು ಅವಳ ಅತ್ತೆಯ ಮನೆಯೆನಿಸಿಕೊಂಡಿದೆ. ಆದರೆ ಈ ಮಹಾನುಭಾವಳು ಮಾತ್ರ ಎರಡೂ ಸ್ಥಳಗಳಲ್ಲಿ ಕಾಣಸಿಗುವುದು ಬಹು ಅಪರೂಪ. ಯಾಕೆಂದರೆ ಅವಳು ಪ್ರತಿಭಾಸಂಪನ್ನಳಾಗಿ ಯಾವಾಗಲೂ ಸಂಚರಿಸುವುದುಂಟು ಯಾರ ಮೇಲೆ ಅವಳ ಅನುಗ್ರಹವಾಗುತ್ತದೆಯೋ ಅಥವಾ ಇದ್ದಕ್ಕಿದ್ದಂತೆ ಯಾರಮೇಲೆ ಕೋಪಗೊಂಡು ಹೊರಟು ಬಿಡುತ್ತಾಳೆಯೋ ಎಂಬುದನ್ನು ಯಾರೂ ನಿರ್ಧಾರವಾಗಿ ಹೇಳಲಾರರು. ಆದುದರಿಂದಲೇ ಭಕ್ತರು ಅವಳ ಇರುವಿಕೆಯನ್ನು ಕುರಿತು ಅನನ್ಯವಾಗಿ ಪ್ರಾರ್ಥನೆ ಸಲ್ಲಿಸುತ್ತಾರೆ.

ಜಗದಂಬ ವಿಚಿತ್ರ ಮತ್ರ ಕಿಂ
ಪರಿಪೂರ್ಣಾ ಕರುಣಾಸ್ತಿ ಚೇನ್ಮಯಿ
ಅಪರಾಧ ಪರಂ ಪರಾವೃತಂ ನಹಿ
ಮಾತಾ ಸಮುಪೇಕ್ಷತೇ ಸುತಮ್ ||

ಹೇ ಲೋಕಮಾತೇ ನೀನು ದಯಮಾಡಿ ನನ್ನಮೇಲೆ ಸಂಪೂರ್ಣವಾಗಿ ಕರುಣೆತೋರಿದ್ದರೆ ಅದರಲ್ಲಿ ಆಶ್ಚರ್ಯವೇನಿದೆ. ಯಾಕೆಂದರೆ ಸಾವಿರಾರು ಅಪರಾಧಗಳನ್ನು ಮಾಡಿದರೂ ಸಹ ತಾಯಿಯಾದವಳು ಮಗುವನ್ನು ಎಂದೂ ಉಪೇಕ್ಷೆಮಾಡಲಾರಳು.

★

# ರಾಘವೇಂದ್ರ ಸಂಸ್ತುತಿ ಮಾಲಿಕೆ

## ನಮೋ ನಮೋ ಗುರುರಾಜ

ರಾಗ – ಕಾಂಬೋದಿ    ತಾಳ – ಝಂಪೆ

ನಮೋ ನಮೋ ಗುರುರಾಜ। ದಿವ್ಯ ತೇಜ ॥ ಪ ॥

ವಿಮಲ ಮಹಿಮನು ನೀನು। ಸುರಕಾಮಧೇನು ॥ ಅ.ಪ. ॥

ಅವನಿಯೊಳು ಮಂಚಾಲಿ ಭವನದಲಿ ವಾಸಿಸುತ
ವಿವಿಧ ಭಕ್ತಪ್ರವರ ನಿವಹಕೊಲಿದು
ಅವರವರ ವಾಂಛಿತವ ತವಕದಲಿ ಪೂರೈಸ
ಸುವಿವೇಕಿ ನಿನ್ನವರ ಸತ್ಸಂಗವೀಯೋ ॥ ೧ ॥

ಅವಿವೇಕಿನಾನು ಎನ್ನವಗುಣಗಳೆಣಿಸದಲೆ
ಭವ ಬಾಧೆಯನು ಬಿಡಿಸು ಗುರುಸಾರ್ವಭೌಮ
ದಿನರಾತ್ರಿಯಲಿ ನಿನ್ನ ನವ ಭಕ್ತಿಯಲಿ ನಾನು
ಸ್ತವನ ಗೈಯ್ಯುವೆನಯ್ಯ ಪಿಡಿಯೆನ್ನ ಕೈಯ್ಯ ॥ ೨ ॥

ತವ ಕೃಪಾಶ್ರಯಕಾಗಿ ತವಕಿಪುದು ಈ ಜೀವ
ಅವಸರದಿ ನಿನ್ನ ಸಂದರ್ಶನವ ನೀಡೋ
ಪವಮಾನವಂದ್ಯ ಶ್ರೀವೇಂಕಟನ ಕೃಪೆಯಿಂದ
ಸುವಿಶಾಲ ಕೀರುತಿಯ ಪಡೆದಂಥ ಪ್ರಭುವೆ ॥ ೩ ॥

## ಕೂಗಿ ಕರೆವರ ಮನೆಗೆ

ರಾಗ – ಕಾಂಬೋದಿ    ತಾಳ – ಝಂಪೆ

ಕೂಗಿ ಕರೆವರ ಮನೆಗೆ ಬೇಗ ಬರುವ
ಯೋಗಿ ಶ್ರೀ ಗುರುರಾಜಗಿಲ್ಲೆನಿತು ಗರುವ ॥ ಪ ॥

ಮಿಂದು ನಿರ್ಮಲ ಮನಸಿನಿಂದೊಂದೆ ಚಿತ್ತದಲಿ
ಅಂದ ವೃಂದಾವನದ ಮುಂದೆ ನಿಂತು
ತಂದೆ ಶ್ರೀ ಗುರುರಾಘವೇಂದ್ರರೇ ಗತಿಯೆಂದು
ವಂದಿಸುತ ಸೇವಿಪಂಗೆಂದೆಂದು ಒಲಿವ ॥ ೧ ॥

ಪರಿಪರಿಯ ಪರಿಚರ್ಯ ಹರುಷದಲಿಗೈಯ್ಯುವರ
ದುರಿತ ರಾಶಿಗಳೆಲ್ಲ ಪರಿಹರಿಸುತ
ಕರೆಕರೆದು ಕನಸಿನಲಿ ದರುಶನವ ನೀಡುತಿಹ
ಗುರುಸಾರ್ವಭೌಮರಿಗೆ ಸರಿದೊರೆಗಳುಂಟೇ? ॥ ೨ ॥

ಸೃಷ್ಟೀಶ ಶ್ರೀ ವೇಂಕಟೇಶ್ವರನ ಕೃಪೆಯಿಂದ
ಎಷ್ಟೆಷ್ಟೊ ಮಹಿಮೆಗಳ ನಿತ್ಯದಲಿ ತೋರಿ
ಶಿಷ್ಟ ಭಕ್ತರ ಕಷ್ಟ ನಷ್ಟಗಳ ಕಳೆದು ಸಂ
ತುಷ್ಟಿಯನು ನೀಡುತ್ತ ಸಂಚರಿಸುತಿಹರು ॥ ೩ ॥



ಶ್ರೀ ಕೆ. ರಾಮಾಚಾರ್ಯ.

# ರಾಘವೇಂದ್ರ ರಾಯರೇ

ರಾಗ – ಮಣಿರಂಗು    ತಾಳ – ಛಾಪು

ರಾಘವೇಂದ್ರ ರಾಯರೇ ಶಿರ ಬಾಗಿ ನಿಮ್ಮನು ವಂದಿಪೆ ॥ ಪ ॥

ಬೇಗನುಗ್ರಹ ಮಾಡಿ ಪರಮನು ರಾಗದಿಂದಲಿ ಪೊರೆವುದು
॥ ಅ. ಪ. ॥

ಏನು ತಿಳಿಯದ ಮಾನವಾಧಮ ನಾನು ನಿಮ್ಮನು ಪೂಜಿಪೆ
ಸಾನುರಾಗದಿ ಒಲಿದು ಎನ್ನಭಿಮಾನದಿಂದಲಿ ಪೊರೆವುದು ॥ ೧ ॥

ಮಂತ್ರ ಮಂದಿರದೊಳಗೆ ನಿಂತು ದಿಗಂತ ಕೀರ್ತಿಯ ತಾಳಿದೆ ।
ಭ್ರಾಂತಮತಿಯನು ಬಿಡಿಸಿ ಲಕ್ಷ್ಮೀಕಾಂತನಾ ಪದ
ತೋರಿಸಿರಿ ॥ ೨ ॥

ಪರಮ ಭಕ್ತಿಲಿ ಭಜಿಸುವರ ಮನ ವರಿತು ವರಗಳ ನೀಡುತ
ಶರಣ ರಕ್ಷಕರೆಂಬ ಬಿರುದನು ಧರಿಸಿ ಧರೆಯೊಳು
ಮೆರೆಯುವ ॥ ೩ ॥

ಚಾರು ವೃಂದಾವನದೊಳಿರ ತಲಪಾರಲೀಲೆಯ ತೋರುತ
ಸಾರಿದರನುದ್ಧರಿಸುವಂತಹ ಧೀರ ಶ್ರೀ ಗುರುರಾಜರೆ ॥ ೪ ॥

ಪತಿತಪಾವನ ವೇಂಕಟೇಶನ ಸ್ತುತಿಸಿ ಜಗದೊಳು ಮೆರೆಯುವ
ಯತಿಪ ನಿಮ್ಮಾಶ್ರಯದಿ ಭಜಿಪರ ಜೊತೆಯೊಳಾಡಿಸಿ
ಪ್ರತಿದಿನ ॥ ೫ ॥



## ವೃಕ್ಷೋ ರಕ್ಷತಿ ರಕ್ಷಿತಃ

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ.

ಮರೆಯದಿರಿ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ,
ಪೋಷಣೆಗಳೂ ಉಂಟು.

# ಗುರುರಾಜ ಭಕ್ತಿಸಾರ

ಪ್ರಥಮದಲಿ ಪ್ರಹ್ಲಾದರೆನ್ನಿಸಿ
ದ್ವಿತಿಯ ಜನ್ಮದಿ ವ್ಯಾಸರೆನಿಸುತ
ತೃತಿಯ ಜನ್ಮದಿ ರಾಘವೇಂದ್ರಸ್ವಾಮಿಯೆಂದೆನಿಸಿ ॥
ಕ್ಷಿತಿಯ ಲವತರಿಸಿದ ಮಹಾತ್ಮನೆ
ಸ್ತುತಿಪೆ ನಿನ್ನನವರತ ಮನಸಿನ
ಖತಿಯ ಕಳೆದತಿ ಹಿತದಿ ಶ್ರೀ ಗುರುರಾಜ ರಕ್ಷಿಪುದು ॥ ೧ ॥

ಗುರುಗಳೆಂದರೆ ಮಂತ್ರನಿಲಯದ
ಗುರುಗಳಲ್ಲದೆ ಅನ್ಯರುಂಟೇ ?
ನಿರುತ ಸೇವಿಸುವಂಥ ಶಿಷ್ಯರಿಗೊಲಿದು ಹರಸದಲಿ ॥
ಕರೆಕರೆದು ಕನಸಿನಲಿ ವರಗಳ
ನೆರೆವ ಕರುಣಾ ಶರಧಿ ಗುರುಗಳ
ಚರಣಗಳಿಗೆರಗುವೆನು ಶ್ರೀ ಗುರುರಾಜ ರಕ್ಷಿಪುದು ॥ ೨ ॥

ದಾತ ಶ್ರೀಮದ್ರಾಘವೇಂದ್ರ ವು
ನೀತ ವೃಂದಾವನದಿ ರಾಜಿಸು
ವಾತ ಭೃತ್ಯರ ಪ್ರೀತಿ ಭೂತಳವರಿಯೆ ವಿಖ್ಯಾತ ॥
ಭೂತ ಪ್ರೇತ ಪಿಶಾಚಿಗಳಭಯ
ವ್ರಾತ–ವಾತುರದಿಂದ ಘಾತಿಪ
ಖ್ಯಾತಿ ಪಡೆದ ಮಹಾತ್ಮ ಶ್ರೀಗುರುರಾಜ ರಕ್ಷಿಪುದು ॥ ೩ ॥

ಆವಭಾವನೆಯಿಂದ ಸೇವಕ
ಸೇವೆ ಸಲ್ಲಿಸುತಿರ್ಪನೆಂಬುದು
ಸಾವಧಾನದಿ ತಿಳಿದು ಫಲ ಮಂತ್ರಾಕ್ಷತೆಗಳಿತ್ತು ॥
ಕಾವ ನಿನ್ನ ಸ್ವಭಾವ ತಿಳಿಯುದು
ಪಾವನಾತ್ಮಕ ನಿನ್ನ ಸಮಗುರು
ಸಾರ್ವಭೌಮರ ಕಾಣೆ ಶ್ರೀ ಗುರುರಾಜ ರಕ್ಷಿಪುದು ॥ ೪ ॥

ತಂದೆ ಶ್ರೀ ಗುರು ರಾಘವೇಂದ್ರರೆ
ವಂದಿಸುವೆ ತವ ಪಾದದ್ವಂದಕೆ
ಹಿಂದೆ ಗೈದಪರಾಧಗಳ ನೊಂದೆಣಿಸದಿರು ಮುಂದೆ ॥
ಎಂದಿಗೆಂದಿಗು ನಿನ್ನ ಭಜಕರ
ವೃಂದದಲಿ ನಲಿವಂತೆ ಮಾಡುವಿ
ರೆಂದು ನೆರೆ ನಂಬಿರುವೆ ಶ್ರೀಗುರುರಾಜ ರಕ್ಷಿಪುದು ॥ ೫ ॥



# ಅನ್ನಮಾಚಾರ್ಯನ ಅಂತರಂಗ

ವಿದ್ವಾನ್ ಬ. ನ. ಗುಂಡೂರಾವ್

ಭಾರತೀಯ ಸಂಸ್ಕೃತಿಯಲ್ಲಿ ಸಾಹಿತ್ಯಕ್ಕೊಂದು ಸ್ಥಾನ, ಸಂಗೀತಕ್ಕೊಂದು ಸ್ಥಾನ. ಈ ಸಂಗೀತ ಸಾಹಿತ್ಯಗಳೆರಡೂ ಮಾನವನ ಮಹಾನ್ ಪ್ರತಿಭೆ ಕಂಡು ಹಿಡಿದ ರಮ್ಯಗಂಭೀರ ಮಾಧ್ಯಮಗಳು. ಇದರಲ್ಲಿ ಸಾಹಿತ್ಯ ಆಲೋಚನಾಮೃತ, ಸಂಗೀತ ಆಪಾತ ಮಧುರ. ಕರ್ನಾಟಕ ಸಂಗೀತ ಪರಂಪರೆಯಲ್ಲಿ ಮಹಾನ್ ವಾಗ್ಗೇಯಕಾರರನೇಕಮಂದಿ ಆಗಿಹೋಗಿದ್ದಾರೆ. ಅವರು ತಮ್ಮ ಜೀವನ ಸಾರ್ಥಕ್ಯಕ್ಕೆ ಸಂಗೀತವನ್ನು ಸಾಧನ ಸಾಮಗ್ರಿಯಾಗಿ ಮಾಡಿಕೊಂಡು, ತನ್ಮೂಲಕ ಪರಮಾತ್ಮನ ಅನಂತ ಕಲ್ಯಾಣ ಗುಣ ಮಹಿಮೆಗಳನ್ನು ಹಾಡಿ ಧನ್ಯರಾದರು—ತದ್ದರ್ಶನ ದಿಂದ ಚರಿತಾರ್ಥರಾದರು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಜ್ಞಾನ, ಕರ್ಮ, ಭಕ್ತಿ ಎಂದು ಮೂರು ಮಾರ್ಗಗಳು ಪ್ರಧಾನವಾಗಿವೆ. ವಾಗ್ಗೇಯಕಾರರು ಭಕ್ತಿಮಾರ್ಗವನ್ನೇ ಅನುಸರಿಸಿದವರು. ಭಕ್ತಿ ಮಾನವ ಜೀವನದ ಮಧುರತಮಭಾವ. ಅದು ಇಷ್ಟದೇವತಾ ಸಾನ್ನಿಧ್ಯಕ್ಕೆ ಸುಲಭಮಾರ್ಗವೆಂದು ಹಿರಿಯರು ಹೇಳುತ್ತಾರೆ.

ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಶ್ರೀಪುರಂದರದಾಸರು ಅಗ್ರಮಾನ್ಯರೆಂಬುದು ನಿರ್ವಿವಾದ. ಆದರೆ ಅವರಿಗಿಂತಲೂ ಪೂರ್ವಿಕರಾದ ತಾಳ್ಳಪಾಕ ಅನ್ನಮಾಚಾರ್ಯರು ಪದಕವಿತಾ ಪಿತಾಮಹರೆಂದು ಪ್ರಸಿದ್ಧರಾಗಿದ್ದಾರೆ. ವಯಸ್ಸಿನಲ್ಲಿ ಪುರಂದರದಾಸರಿಗಿಂತಲೂ ಹಿರಿಯರಾದ ಈ ಪೂಜ್ಯರು ಪುರಂದರದಾಸರ ಮೇಲೆ ತಮ್ಮ ಪ್ರಭಾವವನ್ನು ಸಾಕಷ್ಟು ಬೀರಿರಲಿಕ್ಕೆ ಸಾಕು. ಅವರ ಇವರ ಕೃತಿಗಳನ್ನು ಅಧ್ಯಯನ ಮಾಡುವಾಗ ಈ ಸಂಗತಿ ಸ್ಪಷ್ಟವಾಗುತ್ತದೆ. ಅನ್ನಮಾಚಾರ್ಯರು ತಮ್ಮ ಪದಗಳಲ್ಲಿ ಸಂಕೀರ್ತನಗಳಲ್ಲಿ—ತಿರುಪತಿ ಶ್ರೀನಿವಾಸನನ್ನು ಬಗೆ ಬಗೆಯಾಗಿ ಕೊಂಡಿದ್ದಾರೆ. ದಾಕ್ಷಿಣಾತ್ಯ ವಾಗ್ಗೇಯಕಾರರಲ್ಲಿ ತಿರುಮಲಾಧೀಶನಾದ ವೆಂಕಟೇಶ್ವರನನ್ನು ಕೊಂಡಾಡಿದವರೇ ಬಹುಶಃ ಯಾರೂ ಇಲ್ಲವೆಂದರೆ ತಪ್ಪಾಗಲಾರದು.



ಕಡಪ ಜಿಲ್ಲೆಯ, ರಾಜಂಪೇಟೆ ತಾಲ್ಲೂಕಿನ ತಾಳ್ಳಪಾಕಗ್ರಾಮದಲ್ಲಿ ಕ್ರಿ.ಶ. 1408ರಲ್ಲಿ ಜನಿಸಿದ ಅನ್ನಮಾಚಾರ್ಯಮತ್ತು ಆತನ ದಿವ್ಯ ಮಂಗಳ ಪದಗಳು ಬಹುಕಾಲದವರೆಗೆ ಭೂಗರ್ಭದಲ್ಲಿಡಗಿ ಹೋಗಿದ್ದು, ಇತ್ತೀಚೆಗೆ ತಿರುಪತಿಯ ವಿದ್ವನ್ಮಣಿಗಳು ನಡೆಸಿದ ಸಂಶೋಧನೆಯ ಫಲವಾಗಿ ಬೆಳಕಿಗೆ ಬಂದದ್ದು ನಾಡಿನ ಪುಣ್ಯ—ಕರ್ನಾಟಕದ ಸಂಗೀತದ ಭಾಗ್ಯ. ನಮ್ಮ ದೇಶದಲ್ಲಿ ಇತಿಹಾಸ ಪ್ರಜ್ಞೆ ಕಡಿಮೆ ಇರುವುದರಿಂದ ಅನೇಕ ಪ್ರಾಚೀನ ಕವಿಗಳ ಬಗ್ಗೆ ಖಚಿತವಾದ—ಸಮಾಚಾರ ಸಿಕ್ಕುವುದು ಕಷ್ಟ. ಅವರ ಕೃತಿಗಳ ಮೂಲಕ ಅಥವ ಸಮಕಾಲೀನ ಸಾಹಿತ್ಯವೇನಾದರೂ ಇದ್ದರೆ, ಸಿಕ್ಕಿದರೆ—ಅದರ ಮೂಲಕ—ಊಹಾಪೋಹಗಳ ಆಧಾರದ ಮೇಲೆ ವಿಚಾರ ಸಂಗ್ರಹ ಮಾಡಬೇಕಾಗುತ್ತದೆ. ಅನ್ನಮಾಚಾರ್ಯರ 32 ಸಹಸ್ರ ಕೀರ್ತನೆಗಳನ್ನು ತಾಮ್ರದ ತಗಡುಗಳ ಮೇಲೆ ಕೆತ್ತಿಟ್ಟಿದ್ದಾರೆ. ಇದರಲ್ಲಿ ಪದಗಳು, ದಿವ್ಯನಾಮ ಸಂಕೀರ್ತನೆಗಳು, ಶೃಂಗಾರ ಕವಿತೆಗಳು—ಲಾಲಿ—ಸುಹಾಲಿ—ಜಾಜರಿ — ಗೊಬ್ಬಿಪಾಟಲು — ಮೇಲುಕೊಲುಪುಲು.........ಹೀಗೆ ನಾನಾ ಜಾತಿಯ—ರೀತಿಯ ಕವಿತೆಗಳಿವೆ. ಒಂದೊಂದು ಜಾತಿಯ ಕವಿತೆಗಳಲ್ಲೊಂದೊಂದು ಬಗೆಯ ಮಾಧುರ್ಯವಿದೆ. ಕೈಗೆಟುಕದ ಸೌಂದರ್ಯ — ಊಹೆಗೂ ನಿಲುಕದ ಮಾಧುರ್ಯ — ಈತನ ಸಾಹಿತ್ಯದ ವೈಶಿಷ್ಟ್ಯ: ಆಧ್ಯಾತ್ಮ ಸಂಕೀರ್ತನೆಗಳಲ್ಲಿ ಭಕ್ತಿ, ಶೃಂಗಾರ ಗೀತೆಗಳಲ್ಲಿ ಸರಸ ಸೌಂದರ್ಯ ತುಂಬಿ ತುಳುಕುತ್ತವೆ. ಬಹುಶಃ ವಾಗ್ಗೇಯಕಾರರಿಗೆ ಈ ಎರಡು ಭಾವಗಳು ತುಂಬ ಪ್ರಿಯವಸ್ತುಗಳಾಗಿರಬಹುದು.

16 ನೇ ವರ್ಷದಲ್ಲಿ ತಿರುಪತಿ ಶ್ರೀನಿವಾಸನ ದರ್ಶನ ಭಾಗ್ಯಪಡೆದು ಪದಕವಿತಾರಚನಾ ಸಾಮರ್ಥ್ಯವನ್ನು ಅನುಗ್ರಹವಾಗಿ ಪಡೆದ ಅನ್ನಮಾಚಾರ್ಯನ ತಂದೆ ನಾರಾಯಣಸೂರಿ, ತಾಯಿ ಲಕ್ಕಮಾಂಬ. ಮಗನಲ್ಲಿ, ಬಾಲ್ಯದಲ್ಲೇ ಕವಿತಾರಚನಾವೈಖರಿಯನ್ನು ಕಂಡಿದ್ದರು, ತಂದೆ ತಾಯಿಗಳು. ಸುಮಾರು 8 ನೇ ವಯಸ್ಸಿನಲ್ಲಿ ಅನ್ನಮಾಚಾರ್ಯ ಪದ್ಮಾವತಿ ದೇವಿಯನ್ನು ಕುರಿತು ಒಂದು ಶತಕ, ಶ್ರೀನಿವಾಸನನ್ನು ಕುರಿತು ಒಂದು ಶತಕವನ್ನು ಆಶು ಕವಿತಾಪ್ರವಾಹವಾಗಿ ಹೇಳಿದ್ದನಂತೆ!!

ತಿರುಪತಿಯಲ್ಲಿ ಪುರಂದರದಾಸರು, ಅನ್ನಮಾಚಾರ್ಯರನ್ನು ಭೇಟಿಮಾಡಿದ್ದರೆಂಬುವುದಕ್ಕೆ ಸಾಕಷ್ಟು ಆಧಾರಗಳಿವೆ ಮತ್ತು ಆತನ ಪದಗಳಿಂದ ದಾಸರು ತುಂಬ ಪ್ರಭಾವಿತರಾಗಿದ್ದರೆಂಬುದಕ್ಕೂ ಸಾಕಷ್ಟು ಆಧಾರಗಳಿವೆ.

ಸಾಳ್ವ ನರಸಿಂಗರಾಯನೆಂಬ ದೊರೆ ಭಕ್ತವರ ಅನ್ನಮಯ್ಯನನ್ನು ಸೆರೆಯಲ್ಲಿಡಿಸಿದ್ದನಂತೆ!! ರಾಜನನ್ನು ಕೊಂಡಾಡಿ ಕವಿತೆ ಹಾಡಲು ಆತ ಇಷ್ಟಪಡಲಿಲ್ಲವೆಂಬ ಕಾರಣಕ್ಕೆ!! ಆದರೇನು ಭಗವಂತ ದಯಾನಿಧಿ ತನ್ನ ಭಕ್ತ ಅನ್ನಮಾಚಾರ್ಯನ ಕೈ ಬಿಡಲಿಲ್ಲತ್ತ

ಸಂಕೆಳ್ಳು ಪೆಟ್ಟಿನ ವೇಳ ಚಂಪ ವಲಚಿನವೇಳ
ವೆಂಕಟೇಶು ನಾಮಮೇ ವಿಡಿಪಿಂಚುಗತಿಗಾಕ
ಪುಂಕು ಜುಡ್ಡು ಪೊರಲಿನ-ಮರಿಲೇಡು ತೆರಗು...

ಎಂಬ ಕೀರ್ತನೆ ಹಾಡಿದಾಗ ಕೈ—ಕಾಲಿಗೆ ಹಾಕಿದ್ದ ಕೋಳಗಳು — ಬಂಧಗಳು ತಾವಾಗಿ ಕಳಚಿ ಹೋಯ್ತು—ಇದನ್ನು ಸ್ವಯಂ ಕಂಡ ನರಸಿಂಗರಾಯ ಆ ಪೂಜ್ಯನ ಕಾಲಿಗೆ ಬಿದ್ದು ಕ್ಷಮೆಯಾಚಿಸಿದನಂತೆ!!

ಇಂತಹ ಅನೇಕ ಘಟನೆಗಳು ಮಹಾಪುರುಷನ ಜೀವನದಲ್ಲಿ ನಡೆದಿವೆ. ಆದರೆ ಅನ್ನಮಾಚಾರ್ಯರ ಕೀರ್ತಿ ಮಹತ್ತ್ವಗಳು ಈ ಘಟನೆಗಳ ಮೇಲೆ

ಆಧಾರ ಪಟ್ಟಿಲ್ಲ. ಆತನ ಕೃತಿಗಳ ಮೇಲೆ ಆಧಾರ ಪಟ್ಟಿದೆ. ಆತನ ಪರಿಶುದ್ಧ ಜೀವನದ ಮೇಲೆ ಆಧಾರಪಟ್ಟಿದೆ

ಅಧ್ಯಾತ್ಮ–ಶೃಂಗಾರ ಎರಡೂ ಮಿಳಿತವಾಗಿರುವ ಕೆಲವು ಕೀರ್ತನಗಳನ್ನೀತ ರಚಿಸಿದ್ದಾನೆ. ಈ ಭಕ್ತವರನ ಕೈಗೆ ಸಿಕ್ಕಿದ ಶೃಂಗಾರವೂ ಪಾವನವಾಗಿದೆ. ಶೃಂಗಾರ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವುಂಟು. ಈತನ ಶೃಂಗಾರ ರಚನೆಗಳು ಭರತನಾಟ್ಯಕ್ಕೆ ಸೂಕ್ತವಸ್ತುವನ್ನೊದಗಿಸುತ್ತವೆ. ಲಲಿತ ಭಾವಗಳನ್ನೊಳಗೊಂಡ ರುಚಿರ ಶೃಂಗಾರ ಕವಿತೆಗಳನ್ನು ಸಂಗೀತ ಕ್ಷೇತ್ರದಲ್ಲಿ ರಚಿಸಿದ ಕ್ಷೇತ್ರಯ್ಯ–ಜಯದೇವ ಮುಂತಾದವರ ಜತೆಗೆ ಅನ್ನಮಾಚಾರ್ಯನೂ ಸೇರಿಕೊಂಡಿದ್ದಾನೆ–ಮೆಚ್ಚಿಗಾಗಿ ಕೆಲವು ಕವಿತೆಗಳನ್ನು ಪ್ರಸ್ತಾಪಿಸುವುದು ಅಪ್ರಾಸಂಗಿಕವಾಗಲಾರದು.

ಸಮಸ್ತ ವಿಶ್ವಕ್ಕೆ ಪ್ರಭುವಾಗಿ, ಸಕಲ ಜೀವಿಗಳ ಅಂತರಾತ್ಮನಾಗಿರುವ ಚೈತನ್ಯಮೂರ್ತಿ ಯಾರು? ಈ ಪ್ರಶ್ನೆ ಅನಾದಿ ಕಾಲದಿಂದಲೂ ಇದೆ. ಈ ಚೈತನ್ಯವನ್ನು ಸಗುಣೋಪಾಸಕರು ನಾನಾ ಹೆಸರಿನಿಂದ ಕರೆದಿದ್ದಾರೆ. ಭಕ್ತರು ನಾನಾ ರೂಪಗಳಲ್ಲಿ ಕಂಡಿದ್ದಾರೆ. ಜಗತ್ತು ನಾನಾರೀತಿಯಲ್ಲಿ ಆರಾಧಿಸುತ್ತಿದೆ. ಧೀಮಂತ ಮನೀಷಿಗಳು ಚಿನ್ತನೆಗೆ ವಸ್ತುವಾದ ಈ ಚೈತನ್ಯವನ್ನು ಅನ್ನಮಾಚಾರ್ಯ ಹೇಗೆ ಬಣ್ಣಿಸಿದ್ದಾನೆ?

ಏತಡವಿಲಂಬುನಕು ನೀಶ್ವರುಂಡೈ ಸಕಲ
ಭೂತಮುಲಲೋನ ತಾ ಬೊದಲುಚುಂಡೆಡುತಡು॥

ಈತ ಇಡೀ ಜಗಧೀಶ್ವರನಾಗಿ ಬ್ರಹ್ಮಾಂಡಕೋಟಿಯಂತರಂಗದಲ್ಲಿ ಸಂಚರಿಸುತ್ತಿದ್ದಾನೆ.

ಗೋಪಾಂಗನಲ ಮೊಗುಗು ಗುಬ್ಬ
ಚನ್ನುಲಮೀದ
ಚಮಟಟ್ಟು ಕಮ್ಮ ಕಸ್ತೂರಿ ಪೂತ ಇತಡು

ಈತ ಗೋಪಾಂಗನೆಯರ ಪೀನಸ್ತನಗಳ ಮೇಲೆ ರಾರಾಜಿಸುವ ಪರಿಮಳ ಕಸ್ತೂರಿಯ ಲೇಪ.

ಜಲಧಿಕನ್ಯಾಪಾಂಗ ಲಲಿತೇಕ್ಷಣ ಮುಲಿಕೆ
ಕಲಸಿ ವೆಲುಗುಚುನ್ನ ಕಜ್ಜಲಂಬಿತಡು

ಈತ ಸಾಗರತನಯೆ ಲಕ್ಷ್ಮೀದೇವಿಯ ವಿಲಾಸಪೂರ್ಣ ಕೊಂಕುನೋಟದಲ್ಲಿ ಬೆರೆತ ಕಾಡಿಗೆ–ಕಪ್ಪು.

**ಪರಿಪೂರ್ಣ ಸುರತ ಸಂಪದಲ ನಿಂಪುಲಚೇತ**
**ಪರವಧೂತತಿಕಿ ಪರವಶಮೈನಡಿತಡು**

ಈತ ಕೊನೆಕಾಣದ ಸುರತ ಸಂಪದದ ಕಾರಣದಿಂದಾಗಿ ವ್ರಜವನಿತೆಯರ ವಶವಾದವನು. ಅನ್ನಮಾಚಾರ್ಯನ ವರ್ಣನೆ ಶೃಂಗಾರದ ಈ ಚೌಕಟ್ಟಿಗೆ ಸೀಮಿತವಾಗುವುದಿಲ್ಲ. ಅದು ರಸಮಯ

ಬೇಕಾದರೆ ಭಕ್ತಿರಸಭೂಯಿಷ್ಠವೂ ಆಗಿದೆ ಅಲ್ಲವೇ? ಅಷ್ಟರಿಂದಲೇ ವಾಗ್ಗೇಯಕಾರ ಮುಂದುವಂದು ಹೀಗೆ ಹೇಳುತ್ತಾನೆ

ಕಾಮಸೋತ್ರಮುಲ ಚಿನ್ನಾ ಸೌಧಮುಲ ಲೋನ
ದೀಪಿಂಚು ಸುಜ್ಞಾನ ದೀಪ ಮಿತಡು
ಜಲಜಾಸನುನಿ ವಸನ ಜಲಧಿ ಮಧ್ಯಮು ನಂದು
ಅಲರ ವೆಲು ವಡಿನ ಪರಮಾಮೃತಂಬಿತಡು
ಶಿರಿವೇಂಕಟಾಚಲಾಧಿಪುಡು ತಾನ್ನೆಯುಂಡಿ
ಪರಿಪಾಲನ ಚೇಯು ಭಾರಕುಂಡಿತಡು

ಈತ ಪರಮತಪೋಧನರ ಚಿನ್ನದ ಸೌಧದಲ್ಲಿ ಬೆಳಗುವ ಜ್ಞಾನದೀಪನಂತೆ!! ಚತುರ್ಮುಖ ಮುಖೋದ್ಭೂತ ವೇದಸಾರಾಮೃತವಂತೆ!! ವೇಂಕಟಾದ್ರಿಯಲ್ಲಿನಿಂತು ಸಮಸ್ತ ಜಗತ್ತಿನ ಭಾರವನ್ನು ಹೊತ್ತು ನಿರ್ವಹಿಸುವ ಪರಮ ಪ್ರಭುವಂತೆ!!

ಅನ್ನಮಾಚಾರ್ಯನ ಅಭಿಪ್ರಾಯ: – ಭಕ್ತಿಗೆ ಸುಗುಣವಾಗಿ ಭಗವಂತ. ತಿರುಪತಿ ಶ್ರೀನಿವಾಸನ ದರ್ಶನಕ್ಕೆ ಹೋದಾಗಲೆಲ್ಲ ಈ ಭಕ್ತವರನ ಈ ಕವಿತೆ ನೆನಪಿಗೆ ಬಂದರೆ ದರ್ಶನಾರ್ಥಿಗಳು ಪುಲಕಿತರಾಗುವುದರಲ್ಲಿ ಸಂದೇಹವಿಲ್ಲ. ವಜ್ರ ವೈಡೂರ್ಯ ಮರಕತ ಪುಷ್ಯರಾಗಾದಿ ನವರತ್ನಗಳು ಕೆತ್ತಿದ ಹಸ್ತ, ಹಾರ ಹೀರಾದಿಗಳಿಂದ ಶೋಭಿಸುವ ನಿಲುವು, ಮಣಿ ಮಾಣಿಕ್ಯಖಚಿತ ಕಿರೀಟ.. ...ಇದೆಲ್ಲ ಶ್ರೀನಿವಾಸನ ಶ್ರೀಮಂತ ವೈಭವ. ಆದರೆ ಸ್ವಾಮಿಯ ಹಸ್ತವನ್ನು ಭಕ್ತಕವಿ ಅನ್ನಮಾಚಾರ್ಯ ಕಾಣುವರೀತಿಯೇ ಬೇರೆ. ಶರಣಾಗತ ಪರಿಪಾಲಕ ಬಿರುದಾಂಕಿತನಾದ ಶ್ರೀಮನ್ನಾರಾಯಣನ ಅವತಾರ ಲೀಲಾ ವಿನೋದಗಳನ್ನೆಲ್ಲ ವರ್ಣಿಸಿ, ಆ ದಿವ್ಯಮಂಗಳ ವರದಹಸ್ತವನ್ನು ಬಣ್ಣಿಸುವ ವೈಖರಿ ಈ ಕವಿತೆಯ ವಸ್ತು–

ಅಂಜರಿಕಿ ಅಭಯಮಿಚ್ಚು ಚೇಯಿ
ಕಂದುವಗು ಮಂಚಿ ಬಂಗಾರು ಚೇಯಿ

ಶರಣೆಂದು ಬೇಡಿ ಬಂದವರೆಲ್ಲರನ್ನೂ ಸಂರಕ್ಷಿಸುವ, ಎಲ್ಲರಿಗೂ ಅಭಯ ಪ್ರದಾನ ಮಾಡುವ, ಸರ್ವಸಮರ್ಥವಾದ ಅಮೂಲ್ಯ ವರದ ಹಸ್ತ

ವೆಲಲೇನಿ ವೇದಮುಲ ವೆದಕಿ ತೆಚ್ಚಿನಚೇಯಿ
ಚಿಲುಕು ಗುಬ್ಬಲ ಕಿಂದ ಚೇರ್ಚಿನಚೇಯಿ
ಕಲಿಕಿಯಗು ಭೂಕಾಂತ ಕೌಗಲಿಂಚಿನಚೇಯಿ
ವಲನೈನ ಕೊನಗೋಳ್ಳ ವಾಡಿಚೇಯಿ

ವೇದಗಳನ್ನು ಕದ್ದೊಯ್ದು ಸಾಗರದಲ್ಲಡಗಿದ ಸೋಮಕಾಸುರನನ್ನು ಸಂಹರಿಸಿ, ವೇದಗಳನ್ನು ತಂದ ಹಸ್ತವದು. ಮಂದಿರಾದ್ರಿಯೇ ಮುಳುಗಿ ಹೋದಾಗ ಅದನ್ನು ಮೇಲೆತ್ತಿ ನಿಲ್ಲಿಸಿದ ಸಮರ್ಥ ಕೈಯದು. ಹಿರಣ್ಯಾಕ್ಷನನ್ನು ಕೊಂದು ಪರಮ ಪ್ರೇಮದಿಂದ ಭೂದೇವಿಯನ್ನಾಲಿಂಗಿಸಿದ ಕೈಯದು ಭಕ್ತ ಶಿರೋಮಣಿ ಪ್ರಹ್ಲಾದನ ಪ್ರಾರ್ಥನೆಯನ್ನು ಮನ್ನಿಸಿ, ಸ್ತಂಭದಲ್ಲಾವಿರ್ಭವಿಸಿ, ಅವನ ತಂದೆಯನ್ನು ಸೀಳಿಬಿಸುಟ–ಕರಲುಗಳಂತಹ ಉಗುರುಗಳುಳ್ಳ ಸಶಕ್ತ ಕೈಗಳವು.

ತನಿವ್ರೋಕ ಬಲಿಚೇತ ದಾನಮು ಡಿಗಿನ ಚೇಯಿ
ಒನರಂಗ ಭೂದಾನ ನೊಸಗು ಚೇಯಿ
ಮೊನಸಿ ಜಲಸಿಧಿಯಮ್ಮು ಮೊನಕು ದೆಚ್ಚಿನ ಚೇಯಿ
ಯೆನಯು ನಾಗೇಲು ಧರಿಯಿಂಚು ಚೇಯಿ

ಬೃಂದಾರಕ ವೃಂದೋದ್ಧಾರ ಸಂಕಲ್ಪದಿಂದ, ತಾನೇ ಸಕಲ ವರದಾಯಕತ್ವಮುಕೆಪಡೆದಿದ್ದರೂ ಸಹ ಬಲಿಯ ಮುಂದೆ ನಿಂತು ಭೂದಾನ ಬೇಡಿದ ಕೈ. ಕ್ಷತ್ರಿಯ ಕುಲಧ್ವಂಸ ಮಾಡಿ ಸಂಪಾದಿಸಿದ ಸಮಸ್ತ ಧರಾಮಂಡಲವನ್ನು ಮಹರ್ಷಿ ಕಶ್ಯಪನಿಗೆ ಸಂತೋಷದಿಂದ ದಾನ ಮಾಡಿದ ಹಸ್ತವಿದು. ಬೃಹದ್ವಾನರ ಸೇನೆಗೆ ದಾರಿಕೊಡದೆ ಅಡ್ಡನಿಂತು ಅಭಿಮಾನಿಷ್ಠ ಸಾಗರ ಗರ್ವಭಂಗಕ್ಕಾಗಿ, ಪ್ರಳಯೋಗ್ರಭೀಕರ ವಿಷತ್ವಂದರಾಸದೃಶ ವಿಶಿಖ. ಬಾಣಾವಳಿಯನ್ನು – ಪ್ರಯೋಗಿಸಿದ ಸಶಕ್ತ ಹಸ್ತವದು

ಪುರಸತುಲ ಮಾನಮುಲು ಪೊಲ್ಲ ಜೇಸಿನ ಚೇಯಿ
ತುರಗಂಬು ಬರಪಡಿ ಜೊಡ್ಡ ಚೇಯಿ
ತಿರುವೇಂಕಟಾಧಿಪುಡೈ ಮೋಕ್ಷಂಬು
ತೆರವು ಪ್ರಾಣುಲಕೆಲ್ಲ ದೆಲಿಪೆಡಿ ಚೇಯಿ

ತ್ರಿಪುರಾಸುರ ವನಿತೆಯರ ಪಾತಿವ್ರತ್ಯಾಭಿಮಾನವನು ಧೂಳೀಪಟ ಮಾಡಿದ ಕೈ. ದುಷ್ಟಸಂಹಾರಕ್ಕಾಗಿ ತೀವ್ರವೇಗದಿಂದ ಚಟುಲಾಶ್ವವನ್ನು ನಡೆಸುವ ಪ್ರಬಲ ಕೈಗಳವು. ಇಷ್ಟೆಲ್ಲ ಆದರೂ ಶೇಷಾದ್ರಿಯಲ್ಲಿ ನೆಲೆಸಿ ಸಕಲ ಜೀವಿಗಳಿಗೂ ಮುಕ್ತಿದಾಯಕವಾದ ಮುದ್ದುಹಸ್ತವದು.

ಸ್ವಾಮಿಯ ಒಂದು ಹಸ್ತ ಕೆಳಮುಖವಾಗಿ ಪಾದಗಳನ್ನು ತೋರಿಸುತ್ತಿದೆ ಇನ್ನೊಂದು ಹಸ್ತ ಅಭಯ ಮುದ್ರೆಯಲ್ಲಿದೆ. ಈ ಚರಣಗಳನ್ನು ಆಶ್ರಯಿಸಿದವರಿಗೆ ಅಭಯನೀಡಿದರ ಸಂಕೇತ. ಮೋಕ್ಷಯಿಷ್ಯಾಮಿ ಮಾಶುಚ–ಎಂಬ ಅಭಯ



ವಾಣಿ ಅನ್ನಮಾಚಾರ್ಯನಂತಹ ಅದೆಷ್ಟು ಭಕ್ತರನ್ನುದ್ಧರಿಸಿದೆಯೋ–ಲೆಕ್ಕವಿಟ್ಟವರಾರು!!

ಯೋಗಃ ಕರ್ಮಸು ಕೌಶಲಂ–ಎನ್ನುತ್ತದೆ ಗೀತೆ. ಯಾವುದೇ ಕಾರ್ಯಮಾಡಲು ಒಂದು ಜಾಣ್ಮೆ–ವಿಶೇಷ ತಿಳವಳಿಕೆ – ಬೇಕು. ಅದಿಲ್ಲದೆ ಮಾಡಿದ ಕಾರ್ಯಗಳೆಲ್ಲ ಭಾರಭೂತವಾಗುತ್ತವೆ – ಅಥವ ವ್ಯರ್ಥವಾಗುತ್ತವೆ. ಜಾಣ್ಮೆಯಿಂದ ಮಾಡಿದ ಕಾರ್ಯಗಳೆಲ್ಲ ಸಾರ್ಥಕವಾಗುತ್ತವೆ – ಉಪಯೋಗವಾಗುತ್ತವೆ ಒಂದೇ ಕರ್ಮವನ್ನು ಜ್ಞಾನಿಯೂ ಮಾಡುತ್ತಾನೆ. ಅದೇ ಕರ್ಮವನ್ನು ಅಜ್ಞಾನಿಯೂ ಮಾಡುತ್ತಾನೆ. ಕರ್ಮ ಒಂದೇ ಆದರೂ ಒಬ್ಬನಿಗೆ ಅದು ತಾರಕವಾಗುತ್ತದೆ–ಮತ್ತೊಬ್ಬನಿಗದು ಮಾರಕವಾಗುತ್ತದೆ. ಒಬ್ಬನಿಗೆ ಬಂಧನ ಕಾರಣವಾಗುತ್ತದೆ. ಇನ್ನೊಬ್ಬನಿಗೆ ಬಿಡುಗಡೆಗೆ ಕಾರಣವಾಗುತ್ತದೆ. ಒಂದೇ ಕೋವಿಯನ್ನು ಬಾಲಕ ಚಲಾಯಿಸಿದಾಗೇನಾದೀತು–ಸೈನಿಕ ಚಲಾಯಿಸಿದರೆ ಏನಾದೀತು?? ಪರಿಣಾಮ ಬೇರೆ–ಇದು ಸರ್ವವಿದಿತವಾದ ಸಂಗತಿ.

ಮನಸ್ಸು–ಶರೀರ–ಕರ್ಮ–ಕೋರಿಕೆಗಳು ಇವೆಲ್ಲ, ಜಗತ್ತಿನ ಕಡೆ ಬಾಗಿದಾಗ ದೋಷಯುಕ್ತವಾಗುತ್ತವೆ. ಪರಮಾತ್ಮನ ಕಡೆಗೆ ಬಾಗಿದಾಗ ದೋಷಮುಕ್ತವಾಗುತ್ತವೆ. ಮನಸ್ಸು ಸಹಜ ಚಂಚಲ. ಇದು ಇಂದ್ರಿಯಗಳನ್ನನುಸರಿಸಿದಾಗ ಜೀವಿಯನ್ನು ಕ್ಷುದ್ರ ಮಾರ್ಗಕ್ಕೆಳೆಯುತ್ತದೆ. ಆದರೆ ಅದೇ ಮನಸ್ಸು ಅಭ್ಯಾಸದಿಂದ, ವೈರಾಗ್ಯದಿಂದ, ನಿಗ್ರಹಿಸಲ್ಪಟ್ಟು, ಒಂದು ನಿರ್ದಿಷ್ಟದಿಕ್ಕಿನಲ್ಲಿ ಪ್ರವಹಿಸಿದಾಗ ಶ್ರೇಯಸ್ಸಾಧನವಾಗುತ್ತದೆ – ಯಾವುದೆಲ್ಲ ಪಾಪಕಾರಣವೆಂದು ಹೇಳುತ್ತಾರೆ, ಅವು ಭಗವತ್ಪರವಾದಾಗ ಪುಣ್ಯಕಾರಕವಾಗುತ್ತದೆ–ಎನ್ನುತ್ತಾನೆ ಅನ್ನಮಾಚಾರ್ಯ.

ಮನಸು ಚಂಚಲ ಮೈನಾ ಮರಿ
ನಿನ್ನುದಲಚಿತೇ
ಜೀವುಲ ಕಿಹಪರ ಸಾಧನ ಮೌನು
ತನುವು ಹೇಯಮೈನಾ ತಗ ನಿನ್ನುಗೊಲಿಚಿತೇ
ತನಿವಡಿ ಅಂತಲೋನೆ ಪವಿತ್ರಮೌನು

ಮನಸ್ಸು ಚಂಚಲ–ನಿಜ ಆದರೆ ಭಗವಚ್ಚಿಂತನೆಯಲ್ಲಿ ಲೀನವಾದರೆ ಇಹಪರ ಸಾಧನವಾದೀತು. ರಕ್ತಮಾಂಸಗಳಿಂದ ಕೂಡಿದ ಮಾನವ ಶರೀರ ಹೇಯವಾದ ವಸ್ತುವೇ ಆದರೂ ಅದು ಭಗವತ್ಸೇವೆಗೆ ವಿನಿಯೋಗಿಸಿದಾಗ ಪವಿತ್ರವಸ್ತುವಾಗುತ್ತದೆ. ನಶ್ವರ ಸುಖಾಪೇಕ್ಷೆ ಬಿಟ್ಟು–ತತ್ತ್ವಚಿಂತನದಿಂದ ಹದಗೊಂಡು – ಭಗವದ್ದರ್ಶನಾಪೇಕ್ಷೆ–ತತ್ಸೇವಾಕಾಂಕ್ಷೆಯುಂಟಾದಾಗ, ಕೋರಿಕೆ ಹೇಗೆ ತಾನೆ ಸಾರಹೀನವಾದೀತು? ಐಹಿಕ ಜೀವನ ದುಃಖಮಯ–ನಿಜ, ಆದರದು ಶ್ರೀವೇಂಕಟೇಶನಿಗೆ ಶರಣಾದಾಗ ತಪಃಫಲವಾಗಲಾರದೇನು? ಇಹ ಜೀವನ ರಂಗವನ್ನು ಸಾಧನಾಕ್ಷೇತ್ರವಾಗಿ ಮಾಡಿಕೊಂಡಾತನಿಗೆ ಈ ಲೋಕವೇ ಪರಲೋಕದಂತೆ ಶಾಂತಿ ಸಮಾಧಾನಗಳನ್ನೀಯದೇನು?

ಅನ್ನಮಾಚಾರ್ಯ ಪದಕವಿತಾಪಿತಾಮಹ, ಮಹಾನ್ ವಾಗ್ಗೇಯಕಾರ, ಮಧುರತರಗಾಯಕ ಶಿಖಾಮಣಿ, ಸಮಾಜ ಸುಧಾರಕ, ಚಿನ್ನನ ಶೀಲ ವ್ಯಕ್ತಿ, ಆತ್ಮ ಭಕ್ತ. ಎಲ್ಲಕ್ಕೂ ಮಿಗಿಲಾಗಿ ಶ್ರೀ ವೇಂಕಟೇಶನ ಶ್ರೀಚರಣ ಕಮಲ ಮಧುಪಾನ ರಸ ಮತ್ತಚಿತ್ತ. ತನ್ನ ಅಮೂಲ್ಯ ಸಂಗೀತ ರಚನೆಗಳ ಮೂಲಕ ನಾಡಿಗೊಂದು ದಿವ್ಯ ಸಂದೇಶ ನೀಡಿದ ಪುಣ್ಯಪುರುಷ.

ಈತ ರಚಿಸಿದ 32 ಸಹಸ್ರಕೀರ್ತನೆಗಳೇನು? ಅವರಲ್ಲಿರುವುದೇನು? ಸಾಹಿತ್ಯದ ಸೊಗಸೇ? ಸಂಗೀತದ ಮಾಧುರ್ಯವೇ? ಶಬ್ದ ಪ್ರಯೋಗ ಚಮತ್ಕಾರವೇ? ಭಾವ ಸೌಂದರ್ಯವೇ? ಸುಕುಮಾರ ಸುಂದರ ಸನ್ನಿವೇಶ ಚಿತ್ರಣದ ವೈಖರಿಯೆ? ಆತನ ಕೃತಿಗಳಲ್ಲಿ ಇವೆಲ್ಲ ಇವೆ–ನಿಜ, ಆದರೆ ಇದೆಲ್ಲವೂ ಗೌಣವೆನ್ನುತ್ತಾನೆ. ಹಾಗಾದರೆ ಪ್ರಧಾನಯಾವುದು?

ದಾಚುಕೊ–ನೀಪಾದಾಲಕು ತಗ ನೇಚೇಸಿನ
ಪೂಜಲಿವಿ
ಪೂಚಿ ನೀ ಕೀರಿತಿ ರೂಪ ಪುಷ್ಪಮುಲಿವಿ–
ಅಯ್ಯಾ

ಒಂದೊಂದು ಕೃತಿಯೂ ಶ್ರಿಯಃಪತಿ ಶ್ರೀನಿವಾಸನ ಪಾದಾರವಿಂದಕರ್ಪಿಸಿದ ಒಂದೊಂದು ಪುಷ್ಪವಂತೆ!! ಶ್ರೀನಿವಾಸನ ಅನುಪಮ–ಅಖಂಡ ಕೀರ್ತಿ ವೈಭವಗಳು ಧರಿಸಿದ ವಿವಿಧ ರೂಪಗಳಂತೆ!!

ನಾನಾಲಿಕ ಪೈನುಂಡಿ ನಾನಾ ಸಂಕೀರ್ತನಲು
ಪೂನಿ ನಾಚೇ ನಿನ್ನು ಪೊಗಡಿಂಚಿತಿವಿ
ವೇ ನಾಮಾಲ ವೆನ್ನುಡಾ ವಿನುತಿಂಚನೆಂತ
ವಾಡ
ಕಾನಿಮ್ಮನಿ ನಾ ಕೀಪುಣ್ಯಮು ಗಟ್ಟಿತಿ ವಿಂತೇ
ಅಯ್ಯಾ

ನನ್ನ ನಾಲಿಗೆಯಲ್ಲಿ ನಿಂತು, ದಿವ್ಯನಾಮ ಸಂಕೀರ್ತನೆಗಳ ಮೂಲಕ ನಿನ್ನನ್ನು ಕೊಂಡಾಡುವಂತೆ ಪ್ರೇರಣೆಕೊಟ್ಟಿರುವೆ. ಸಹಸ್ರ ನಾಮಗಳಿಂದ ಕೊಂಡಾಡಲ್ಪಡುವ ಪರಮ ಪ್ರಭು, ನಿನ್ನನ್ನು ಕೊಂಡಾಡಲು ನಾನೆಷ್ಟರವನು. ಕೆಲಸಕ್ಕೆಬಾರದ ಈ ಅನ್ನಮಾಚಾರ್ಯನಿಗೂ–ಭಕ್ತನೆಂದು ವಾಗ್ಗೇಯಕಾರನೆಂದು ಪುಣ್ಯ ಪಟ್ಟ ಕಟ್ಟಿದೆ. ಇದೆಂತಹ ಚೋದ್ಯ!! ಇದೆಂತಹ ಕರುಣೆ–ಇದೆಂತಹ ಕೃಪೆ–ಎನ್ನುವ ಈ ಮಹಾಪುರುಷನ ವಿನಯ, ದೈವೀ ಸಂಪತ್ತಲ್ಲದಿದ್ದರೆ – ಇನ್ನು ದೈವೀ ಸಂಪತ್ತೆಂಬುದು ಬೇರಾವುದುಂಟು!! ★

# ನ್ಯಾಸವಿದ್ಯಾ ಪ್ರತಿಪಾದನ

ಶ್ರೀ ಡಿ. ಕೃಷ್ಣೈಯಂಗಾರ್

ವೇದಾಂತಶಾಸ್ತ್ರದಲ್ಲಿ ಮೂವತ್ತನಾಲ್ಕು ಬ್ರಹ್ಮವಿದ್ಯೆಗಳಿವೆ. ಅವುಗಳ ಸ್ವರೂಪ ಉಪಾಸ್ಯ, ಗುಣವಿಶೇಷ, ಅಂಗೋಪಾಂಗ ಇತ್ಯಾದಿ ವಿಷಯಗಳೆಲ್ಲವೂ ಉಪನಿಷತ್ತುಗಳಲ್ಲಿ ಉಪದೇಶಿಸಲ್ಪಟ್ಟಿವೆ. ಅಜಾವಿದ್ಯಾ, ಅಕ್ಷರವಿದ್ಯಾ, ಆನಂದಮಯ ವಿದ್ಯಾ, ಈಶಾವಾಸ್ಯವಿದ್ಯಾ, ದಹರವಿದ್ಯಾ, ನ್ಯಾಸವಿದ್ಯಾ, ಪುರುಷವಿದ್ಯಾ, ಪಂಚಾಗ್ನಿವಿದ್ಯಾ, ಭೂಮವಿದ್ಯಾ, ಮಧುವಿದ್ಯಾ, ಸದ್ವಿದ್ಯಾ, ಸಂವರ್ಗವಿದ್ಯಾ – ಇತ್ಯಾದಿ 34 ವಿದ್ಯೆಗಳೂ ಸಮಾನಮೋಕ್ಷ ದೊರೆಯುವುದು. ಯಾರೇ ಆಗಲಿ, ಯಾವುದಾದರೊಂದು ವಿದ್ಯೆಯನ್ನು ಅವಲಂಬಿಸಿ ಸಾಂಗೋಪಾಂಗವಾಗಿ ಆಚರಿಸಿ, ಸಂಚಿತ ಆನಭ್ಯುಪಗತ, ಮತ್ತು ಪ್ರಾರಬ್ಧ ಪಾಪದಿಂದ ಮುಕ್ತನಾಗಿ, ಮೋಕ್ಷಪಡೆಯಬಹುದು. ವಿಶಿಷ್ಟಾದ್ವೈತ ದರ್ಶನದಲ್ಲಿ ನ್ಯಾಸವಿದ್ಯೆಗೆ ವಿಶೇಷ ಮಹತ್ವ ಇದೆ. ಇದು ಪಾಂಚರಾತ್ರ ವಚನಗಳಿಂದ ಉಪಪಾದಿತವಾಗಿದೆ. ಇದು ವೇದ ಪ್ರತಿಪಾದಿತವಾದುದು. ಇದನ್ನು, ಪ್ರಪತ್ತಿ, ಶರಣಾಗತಿ, ಭರಸಮರ್ಪಣ, ಆಚಾರ್ಯಾನುಗ್ರಹ ಎಂದು ಕರೆಯಲಾಗಿದೆ. ಇಂತಹ ನ್ಯಾಸವಿದ್ಯೆಯನ್ನು ಸಮಸ್ತ ಚೇತನರೂ, ಜಾತಿ, ಕುಲ, ಸ್ತ್ರೀ ಪುರುಷ ಭೇದವಿಲ್ಲದೆ ಆಚರಿಸಬಹುದು.

"ಸರ್ವೇಶ್ವರನೂ, ಸರ್ವಶಕ್ತನೂ, ಸ್ವತಂತ್ರ ಸ್ವತಂತ್ರನೂ ಆದ ಶ್ರೀಮನ್ನಾರಾಯಣನೇ, ಅಕಿಂಚನನೂ, ಅನನ್ಯಗತಿಕನೂ, ಪರತಂತ್ರನೂ ಆಗಿ ಜೀವಾತ್ಮನಾದ ನಾನು, ನನ್ನನ್ನು ರಕ್ಷಿಸುವವರು ನಿನ್ನನ್ನು ಬಿಟ್ಟರೆ ಇನ್ಯಾರೂ ಇಲ್ಲವೆಂಬ ದೃಢ ವಿಶ್ವಾಸದಿಂದ, ನಿನ್ನ ಪಾದಾರವಿಂದಗಳಲ್ಲಿ ನನ್ನ ಆತ್ಮವನ್ನು ಅರ್ಪಿಸಿದ್ದೇನೆ, ನಮಸ್ಕರಿಸಿದ್ದೇನೆ. ಈ ನನ ಆತ್ಮ ಭರವನ್ನು ನೀನು ಸ್ವೀಕರಿಸಿ, ರಕ್ಷಿಸಿ, ಮೋಕ್ಷಾನಂದವನ್ನು ಕರುಣಿಸಬೇಕು" – ಎಂದು ಪ್ರಾರ್ಥಿಸುವುದೇ ನ್ಯಾಸವಿದ್ಯೆಯ ಸೂಕ್ಷ್ಮ ವಿವರಣೆ ಇಂತಹ ನ್ಯಾಸವಿದ್ಯಾರೂಪ, ಶರಣಾಗತಿಯನ್ನು ಎಲ್ಲ ದರ್ಶನಗಳೂ ಅಂಗೀಕರಿಸಿವೆ. ಹೀಗೆ ನ್ಯಾಸವಿದ್ಯೆಯು ಸರ್ವಸಮಾನತಾಭಾವವನ್ನು ಸೂಚಿಸುವುದು.

ನ್ಯಾಸವಿದ್ಯೆಯು ವಿಷಯವಾಗಿ ಅನೇಕ ಆಕ್ಷೇಪಣೆಗಳು ಹುಟ್ಟಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಿ, ಅವುಗಳಿಗೆ ಶಾಸ್ತ್ರಕಾರರು ತಿಳಿಸಿರುವ ಸೂಕ್ತ ಉತ್ತರಗಳನ್ನು ಇಲ್ಲಿ ನಮೂದಿಸುವುದು ಈ ಲೇಖನದ ಉದ್ದೇಶವಾಗಿದೆ.

೧ ನ್ಯಾಸವಿದ್ಯೆಯು ಮಾನಸಿಕವಾದ ವೈದಿಕ ಆಚರಣೆ ಯೋಗರೂಪವಾದುದು. ಅದರಲ್ಲಿ ಎಲ್ಲರಿಗೂ ಸಮಾನ ಅಧಿಕಾರ ಇದೆ ಎಂದರೆ ಅದನ್ನು ನಂಬುವುದು ಹೇಗೆ?

"ನ್ಯಾಸಃ ಪಂಚಾಂಗ ಸಂಯುತಃ" 'ಷಡ್ವಿಧಾ ಶರಣಾಗತಿಃ,' 'ಸರ್ವಸ್ಯ ಶರಣಂ ಸುಹೃತ್" ಎಂಬುವು ಶ್ರುತಿವಾಕ್ಯಗಳು. ತೈತ್ತಿರೀಯ, ಶ್ವೇತಾಶ್ವತರ ಉಪನಿಷತ್ತುಗಳು ನ್ಯಾಸ ವಿದ್ಯೆಯನ್ನು ಆಚರಿಸಬೇಕು ಎಂದು ತಿಳಿಸಿವೆ ಇದನ್ನು ಸರ್ವರೂ ಆಚರಿಸಬಹುದೆಂದು ಸ್ಪಷ್ಟಪಡಿಸಿವೆ. "ನ ಜಾತಿಭೇದಂ, ನಕುಲಂ, ನಲಿಂಗಂ, ನಗುಣಕ್ರಿಯಂ, ನದೇಶಕಾಲಮವಸ್ಥಾಂ ಯೋಗೋಹ್ಯಯಮಪೇಕ್ಷ್ಯತೇ' ಎಂದು ಹೇಳಿದೆ ನ್ಯಾಸವಿದ್ಯೆಯು, ಜಾತಿಭೇದವನ್ನಾಗಲಿ ಉತ್ಕೃಷ್ಟ, ನಿಕೃಷ್ಟಕುಲ ವ್ಯತ್ಯಾಸವನ್ನಾಗಲಿ, ಸ್ತ್ರೀ ಪುರುಷ ಭೇದವನ್ನಾಗಲಿ, ದೇಶಕಾಲ ವಿವೇಚನೆಯನ್ನಾಗಲಿ, ಅಪೇಕ್ಷಿಸುವುದಿಲ್ಲ, ಆದರೆ, ಕೆಲವರು ಮಂತ್ರವತ್ತಾಗಿಯೂ, ಇನ್ನು ಕೆಲವರು ತಾಂತ್ರಿಕವಾಗಿಯೂ ಆಚರಿಸಬೇಕು. ಗುರುಮುಖೇನ-ಎಂದು ತಿಳಿಸಿದೆ.

ಶ್ರೀಕೃಷ್ಣ ಪರಮಾತ್ಮನು ಸಮಸ್ತ ಚೇತನರೂ, ತನ್ನನ್ನು ಆಶ್ರಯಿಸಲು ಅಧಿಕಾರಹೊಂದಿದ್ದಾರೆ ಎಂದು ಹೇಳಿದ್ದಾನೆ.

"ಮಾಂ ಹಿ, ಪಾರ್ಥ! ವ್ಯಪಾಶ್ರಿತ್ಯ, ಯೇಪಿಸ್ಯುಃ ಪಾಪ ಯೋನಯಃ ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾ ಸ್ತೇಽಪಿ ಯಾಂತಿ ಪರಾಂಗತಿಂ"

೨ ನ್ಯಾಸವಿದ್ಯೆಯು ಒಂದು ಬಗೆಯ ಆಚರಣೆ ಅಸಮರ್ಥನು ಸಮರ್ಥನನ್ನು ಆಶ್ರಯಿಸುವುದು. ಇದು ಲೋಕ ಸ್ವಭಾವ ಹಾಗೆ ಆಶ್ರಯಿಸಿದರೆ ಸಮರ್ಥನು ರಕ್ಷಿಸಿಯೇ ರಕ್ಷಿಸುವನು. ಹೀಗಿರುವಾಗ ನ್ಯಾಸವಿದ್ಯೆ ಎಂಬ ಶಾಸ್ತ್ರವಿಧಿ ಏಕೆ?

ಶಾಸ್ತ್ರ ವಿಧಿಯಂತೆ ಪರಮಾತ್ಮನನ್ನು ಪ್ರಾರ್ಥಿಸಬೇಕು. ಧ್ಯಾನಿಸಬೇಕು. ಸೇವೆ ಮಾಡಬೇಕು. ಹಾಗೆ ಮಾಡದಿದ್ದರೆ ಅಪಚಾರವಾಗುವುದು ಶಾಸ್ತ್ರವಿಧಿಯಂತೆ ಗುರೂಪದೇಶ, ಮಂತ್ರಜ್ಞಾನ-ಇವೆರಡನ್ನು ಆಚರಿಸಬೇಕು. ಸಾಧ್ಯೋಪಾಯವಾದ ನ್ಯಾಸವಿದ್ಯೆಯನ್ನು ಅನುಸರಿಸಬೇಕು. 'ಶರಣಂ ವ್ರಜ' ಎಂಬ ವಿಧಿವಾಕ್ಯ ಇದೆ.

೩. ಜೀವಾತ್ಮನು ಪರತಂತ್ರನು. ಅವನಿಗೆ ಕರ್ತೃತ್ವವಿಲ್ಲ. ಆದುದರಿಂದ ಭಕ್ತಿ ಪ್ರಪತ್ತಿಗಳು ಅಸಂಭಾವಿತಗಳಾಗಿ, ಸ್ವರೂಪ ವಿರುದ್ಧವಾಗುವುದಿಲ್ಲವೇ? ಅನರ್ಥಕಾರಕವಾಗುವುದಿಲ್ಲವೇ?

ಜೀವಾತ್ಮನು ಆಚರಿಸುವ ಉಪಾಯಗಳು ಮೋಕ್ಷ ಸಾಧನೆಗಾಗಿಯೇ ವಿನಹ, ಐಹಿಕ ಅಭಿಲಾಷೆಗಾಗಿ ಅಲ್ಲ. ಅವು ಬಾಧಕಗಳಲ್ಲ. ಮೋಕ್ಷಕ್ಕಾಗಿ ಅವನ್ನು ಆಚರಿಸಬೇಕೆಂಬ ಶ್ರುತಿವಾಕ್ಯಗಳಿವೆ.

೧. ತಜ್ಜಲಾನಿ ಶಾಂತ ಉಪಾಸೀತ
೨. ಬ್ರಹ್ಮವಿತ್ ಬ್ರಹ್ಮೈವಭವತಿ
೩. ತಮೇವಂ ವಿದ್ವಾನ್ ಅಮೃತ ಇಹ ಭವತಿ.
೪. ಯ ಏವಂ ವಿದುರಾಸ್ತೇ ಭವತಿ.

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4-50

ಸ್ವಪ್ನವೃಂದಾವನಾಖ್ಯಾನ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
–ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ)
–ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ
–ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0-50

" " (ಕನ್ನಡ ಲಿಪಿಯಲ್ಲಿ) 0–12

ಮಕ್ಕಳಿಗಾಗಿ :

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
–ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ ಸಿ. ವರದಾಚಾರಿ ಹಾಗೂ
ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1)
–ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ
–ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
–ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್ ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

ಗೀತೆಯಲ್ಲಿಯೂ ಪ್ರಮಾಣವಾಕ್ಯಗಳಿವೆ.

1. ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯ ಯುಕ್ತಾ ಉಪಾಸತೇ

2. ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ

3. ತೇಷಾಮಹಂ ಸಮುದ್ಧರ್ತಾ
ಮೃತ್ಯುಸಂಸಾರಸಾಗರಾತ್– ಇಂತಹ ಅನೇಕ ಪ್ರಮಾಣಗಳಿರುವುದರಿಂದ ಮೋಕ್ಷೋಪಾಯಗಳು ಅಪಾಯಗಳೂ ಅಲ್ಲ ಮತ್ತು ಅನರ್ಥಕಾರಿಯೂ ಅಲ್ಲ.

4. ಕಲಿಯುಗದಲ್ಲಿ ದೋಷಗಳು ಅನೇಕ, ತೊಂದರೆಗಳು ಹುಟ್ಟಿಕೊಂಡಿವೆ ಉಪಾಸನಾದಿಗಳನ್ನು ಆಚರಿಸುವುದು ಕಷ್ಟ.ಮನಸ್ಸು ಚಂಚಲ, ನ್ಯಾಸವಿದ್ಯೆ ಬೇಕಾಗಿಲ್ಲ. ನಾಮ ಸಂಕೀರ್ತನವೇ ಸಾಕು.

ಧ್ಯಾಯನ್ ಕೃತೇ ಯಜನ್ ಯಜ್ಞೈಃ
ತ್ರೇತಾಯಾಂ ದ್ವಾಪರೇ ಅರ್ಚಯನ್ ।
ಯದಾಪ್ನೋತಿ ತದಾಪ್ನೋತಿ,
ಕಲೌ ಸಂಕೀರ್ತ್ಯ ಕೇಶವಾತ್ ॥

ಎಂಬಂತೆ ಕೃತಯುಗದಲ್ಲಿ ಉಪಾಸನೆ, ತ್ರೇತಾಯುಗದಲ್ಲಿ ಯಜ್ಞ ಯಾಗಾದಿಗಳು, ದ್ವಾಪರಯುಗದಲ್ಲಿ ಆರಾಧನೆ, ಇತ್ಯಾದಿಗಳಿಂದ ಯಾವಫಲ ದೊರೆಯುವುದೋ ಅದೇ ಫಲವನ್ನು ಕಲಿಯುಗದಲ್ಲಿ ಸಂಕೀರ್ತನದಿಂದ ಪಡೆಯಬಹುದು ಎಂದು ಹೇಳಿರುವಾಗ ನ್ಯಾಸ ವಿದ್ಯೆಯ ಅಗತ್ಯವೇನು ?

ಕಲಿಯುಗದಲ್ಲಿ ನಾಥಮುನಿ. ಪುಂಡರೀಕಾಕ್ಷರಂತಹ ಯೋಗನಿಷ್ಠರು, ಪರಮಾತ್ಮನನ್ನು ಉಪಾಸನೆಮಾಡಿ ಕೃತಕೃತ್ಯರಾಗಿದ್ದಾರೆ. ಆದುದರಿಂದ ಭಕ್ತಿಗೆ ಅಧಿಕಾರಿಗಳಿಲ್ಲ ಎಂದು ಹೇಳುವುದು ಸರಿಯಲ್ಲ. ಇಂತಹವರು ವಿರಳ ಎಂದು ಬೇಕಾದರೆ ಹೇಳಬಹುದು. ಸಂಕೀರ್ತನವೇ ಸರಿಯಾದ ಉಪಾಯ, ಉಪಾಸನೆ ಅಲ್ಲ ಎಂದರೆ ನ್ಯಾಸವಿದ್ಯೆಯೂ ಉಪಾಯವಲ್ಲ ಎಂದು ಹೇಳಬೇಕಾಗುವುದು. ಉಪಾಸನದ ಅಧಿಕಾರಿಗಳು ಸ್ವಭಾವಿತರು ಎಂದ ಒಪ್ಪಿಕೊಳ್ಳದೇ ಹೋದರೆ ಸಂಕೀರ್ತನಕ್ಕೆ ವ್ಯತಿರಿಕ್ತವಾದ ಪ್ರಸಕ್ತಿ ದ್ವಯಮಂತ್ರೋಚ್ಚಾರಣೆ, ಆಚಾರ್ಯಾನುಗ್ರಹ– ಇತ್ಯಾದಿಗಳ ಮಹಿಮೆಯನ್ನು ತಿಳಿಸುವುದು ಕಷ್ಟವಾಗುವುದು. ಯಾವಾಗ ಉಪಾಸಕರು ದೊರೆಯುವುದು ಕಷ್ಟ ಎಂದಾಯಿತೋ, ಆಗ ನ್ಯಾಸವಿದ್ಯೆಯೂ ಕಷ್ಟ ಎಂದಾಗುವುದು "ಕೀರ್ತನಾ ದೇವ" ಎಂಬ ಮಾತಿನ ಅರ್ಥ ಏನೆಂದರೆ ಅದು ಸುಲಭ ಎಂದು ತಿಳಿಸುವುದಕ್ಕಾಗಿ ಮಾತ್ರ ಸಮರ್ಥರು ಭಕ್ತಿಯನ್ನೂ, ಅಸಮರ್ಥರು ನ್ಯಾಸವಿದ್ಯೆಯನ್ನೂ, ಆಚರಿಸಬಹುದು.

5. ಪ್ರಪತ್ತಿಯನ್ನು ಆಚರಿಸಿದವನು ಪ್ರಪನ್ನನು ನ್ಯಾಸವಿದ್ಯೆಗೆ ಪ್ರಾರಬ್ಧ ಪಾಪವನ್ನು ಹೋಗಲಾಡಿಸುವ ಶಕ್ತಿ ಇದ್ದರೆ, ಪ್ರಪನ್ನನಿಗೆ ದುಃಖವೂ ಉಂಟಾಗಬಾರದು. ಅಂತಹ ಘಟನೆ ಕೂಡ ಬರಕೂಡದು. ಆದರೆ ಲೋಕದಲ್ಲಿ ಹೀಗಿಲ್ಲವಲ್ಲಾ ! ರಾಮಾನುಜರು ಪುಂಡರೀಕಾಕ್ಷರು ದುಃಖ ಅನುಭವಿಸಿದರಲ್ಲ ! ವಸಿಷ್ಠರಿಗೆ ಪುತ್ರಶೋಕ ಪ್ರಾಪ್ತವಾಗಲಿಲ್ಲವೇ. ದೂರ್ವಾಸರಿಗೆ ಭಾಗವತಾಪಚಾರ ಉಂಟಾಗಲಿಲ್ಲವೇ ? ಜೀವಾತ್ಮನಿಗೆ ಹಿತವನ್ನು ಉಂಟುಮಾಡುವ ಪರಮಾತ್ಮನು ಜೀವಾತ್ಮನು ಪ್ರಾರ್ಥಿಸದಿದ್ದರೂ ರಕ್ಷಿಸಬೇಡವೇ ? ಇದು ಅವನ ಕರ್ತವ್ಯವಲ್ಲವೇ ? ಇತ್ಯಾದಿ ಆಕ್ಷೇಪಣೆಗಳಿವೆ.

ಪರಮಾತ್ಮನು ಜೀವಾತ್ಮನ ವಿಷಯದಲ್ಲಿ ಅನುಗ್ರಹಶೀಲನು. ಪ್ರಪನ್ನನು ದುಃಖವನ್ನು ಅಪೇಕ್ಷಿಸದೆ, ಸುಖವನ್ನೇ ಇಚ್ಛಿಸುವುದಾದರೆ ಇಹದಲ್ಲಿಯೇ ಇರಬೇಕೆಂಬ ಮನಸ್ಸು ಉಂಟಾಗುವುದು. ಆದರೆ ಜೀವನು 'ಪ್ರಿಯಮಿವಾತಿಥಿಂ' ಎಂದು ಮೃತ್ಯುವನ್ನು ಸ್ವಾಗತಿಸಬೇಕು. ಐಹಿಕ ಜೀವನದಲ್ಲಿ ಜಿಹಾಸೆಯನ್ನು ಹುಟ್ಟಿಸಿ, ಭಗವದನುಭವದಲ್ಲಿ ಆಸೆ ಹುಟ್ಟಿಸಲಿಕ್ಕಾಗಿ ಜೀವನವಿತ್ತವನ್ನು ಅಪಹರಿಸುವೆನು ಎಂದು ಸ್ವಾಮಿ ಹೇಳಿದ್ದಾನೆ.

ಯಸ್ಯಾನುಗ್ರಹಮಿಚ್ಛಾಮಿ
ಹರಿಷ್ಯೇ ತದ್ಧನಂ ಶನೈಃ ।
ತಪೋಧನ ತ್ಯಜನ್ತ್ಯಸ್ಯ
ಸ್ವಜನಾಃ ದುಃಖ ದುಃಖಿತಂ ॥
ಸತಥಾ ವಿತಥೋದ್ಯೋಗೋ
ನಿರ್ವಿಣ್ಣಸ್ಸ್ಯಾದ್ಧನೇಹಯಾ ।
ಮತ್ಪರೈಃ ಕೃತಮೈತ್ರಸ್ಯ
ಕರಿಷ್ಯೇ ಮದನುಗ್ರಹಃ ॥

ತಂದೆಯು ಮಗನಿಗೆ ಅಲ್ಪದಂಡನೆ ಕೊಟ್ಟು ಸರಿಯಾದ ಮಾರ್ಗಕ್ಕೆ ತರುವುದು ಹೇಗೆ ಅನುಗ್ರಹವಾಗುವುದೋ ಹಾಗೆ ಪರಮಾತ್ಮನು ಪ್ರಪನ್ನನಿಗೆ ಅಲ್ಪದಂಡನೆ ಕೊಟ್ಟು ಮೋಕ್ಷ ಕೊಡುವನು. ಸ್ವಾಮಿಯು ಕ್ಲೇಶಕೊಟ್ಟನೆಂದು ನಿಂದಿಸಬಾರದು. ನ್ಯಾಸವಿದ್ಯೆಗೆ, ಪ್ರಾರಬ್ಧಪಾಪವನ್ನು ಹೋಗಲಾಡಿಸುವ ಶಕ್ತಿ ಇದೆ ಎಂದು ತಿಳಿಯಬೇಕು. ಭಾಗವತೋತ್ತಮರಿಗೆ ಇಂತಹ ದುಃಖ ವುಂಟಾದರೆ. ಅವರಿಗೆ ಇಹಜೀವನದಲ್ಲಿ ಜಿಹಾಸೆ ಹುಟ್ಟಿಸಲಿಕ್ಕಾಗಿ ಎಂದು ತಿಳಿಯಬೇಕು. ಈ ದುಃಖಾನುಭವಗಳು ಮುಂದೆ ಸುಕೃತಗಳಾಗಿ ಸಾಧುಸಮಾಗಮ, ಸದ್ಗುರು ಪ್ರಾಪ್ತಿ. ಉಪಾಯಾನುಷ್ಠಾನ ಪ್ರಾಪ್ತಿ ಆಗುವುದು.

ವಸುದೇವ ದೇವಕಿಯರಿಗೆ ಬಂದ ದುಃಖ ರೂಪ ಶಿಕ್ಷೆಯು ಪರಮಾತ್ಮನನ್ನೇ ಪುತ್ರನನ್ನಾಗಿಪಡೆಯುವ ಸುಕೃತವಾಯಿತು. ಪಾಂಡವರಿಗೆ ಬಂದ ದುಃಖವು ಅವರು ಭಗವದನುಗ್ರಹ ಪಡೆಯುವಂತಾಯಿತು. ಧ್ರುವನಿಗುಂಟಾದ ಕ್ಲೇಶವು ಅವನಿಗೆ ಮಹತ್ತಾದ ಶ್ರೇಯಸ್ಸನ್ನು ತಂದಿತು. ಪ್ರಹ್ಲಾದನಿಗೆ ಉಂಟಾದ ದುಃಖ ರೂಪ ಶಿಕ್ಷೆಯು ಅವನಿಗೆ ಪರಮಾತ್ಮನಲ್ಲಿ ಪರಮ ಭಕ್ತಿಯನ್ನು ತುಂಬಿತು. ಹೀಗೆ ಪ್ರಪನ್ನನಿಗೆ ದುಷ್ಕೃತವುಂಟಾದರೂ ಪರಮಾತ್ಮನು ಅವನಿಗೆ ಅಲ್ಪದಂಡನೆ ಕೊಟ್ಟು ಅನುಗ್ರಹಿಸುವನು.

6) ನ್ಯಾಸವಿದ್ಯೆಯು ಒಂದು ಕ್ಷಣಕಾಲದ ಆಚರಣೆ ಇದು ನಿರತಿಶಯವಾದ ಮೋಕ್ಷವನ್ನುಂಟುಮಾಡುವುದೆಂದುಹೇಳಿದರೆ ನಂಬುವುದು ಹೇಗೆ ? ಇದು ಅತಿಶಯೋಕ್ತಿಯಲ್ಲವೇ ? ಎಂದು ಹೇಳುವವರು ಇದ್ದಾರೆ.

ಬ್ರಹ್ಮಹತ್ಯಾದಿ ಪಾತಕಗಳು ಒಂದೇ ಕ್ಷಣದಲ್ಲಿ ಮಾಡತಕ್ಕವುಗಳು, ಅವುಗಳಿಗೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 200=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ (ಒಂದು ವರ್ಷಕ್ಕೆ) | ರೂ – 42=00 |
| ಶಾಶ್ವತ ನಿತ್ಯಾರ್ಚನೆ | ರೂ – 512=00 |

ಬಹುಕಾಲದ ನರಕವಾಸವನ್ನುಂಟು ಮಾಡುವ ಶಕ್ತಿ ಇದೆ ಎಂದು ಒಪ್ಪಿಕೊಳ್ಳುವಾಗ ಒಂದು ಕ್ಷಣಕಾಲದ ಭಗವಧ್ಯಾನವು ಶಾಶ್ವತ ಸುಖವನ್ನುಂಟುಮಾಡುವುದು ಎಂದು ಒಪ್ಪಿಕೊಳ್ಳುವುದರಲ್ಲಿ ಅಭ್ಯಂತರವೇನು? ಕ್ಷಣಕಾಲ ಆಚರಿಸಿದ ಸುಕೃತಗಳಿಗೆ ಶ್ರೇಯಸ್ಸನ್ನುಂಟುಮಾಡುವ ಶಕ್ತಿ ಇದೆ ಎಂಬುದನ್ನು ಹೇಗೆ ಒಪ್ಪಿಕೊಳ್ಳಬಹುದೋ, ಹಾಗೆ ನ್ಯಾಸವಿದ್ಯೆಗೂ ನಿರತಿಶಯ ಶ್ರೇಯಸ್ಸನ್ನುಂಟುಮಾಡುವ ಶಕ್ತಿ ಇದೆ ಎಂದು ಒಪ್ಪಿಕೊಳ್ಳಬಹುದು. ಎಂತಹ ಪಾತಕಗಳನ್ನಾದರೂ ನ್ಯಾಸವಿದ್ಯೆಯು ಹೋಗಲಾಡಿಸಬಲ್ಲದು ಎಂಬುದಕ್ಕೆ ಅನೇಕ ಪ್ರಮಾಣಗಳಿವೆ.

ರಾಗದ್ವೇಷಾದಿಗಳು ಮಾನವನ ಪ್ರಬಲ ಶತ್ರುಗಳು. ಇವನ್ನು ವಿವೇಕ, ಜ್ಞಾನ, ಭಕ್ತಿ, ವೈರಾಗ್ಯ ಇತ್ಯಾದಿಗಳು ಜಯಿಸುವುವು. ಅರಿಷಡ್ವರ್ಗ ಎಂಬ ರಾಕ್ಷಸರಿಗೂ, ವಿವೇಕ, ಜ್ಞಾನಾದಿಗಳೆಂಬ ದೇವತೆಗಳಿಗೂ ಈ ದೇಹವೆಂಬ ಪಟ್ಟಣದಲ್ಲಿ ಯುದ್ಧ ನಡೆಯುತ್ತದ. ಸಮುದ್ರ ಮಥನಕಾಲದಲ್ಲಿ ಪರಮಾತ್ಮನು ದೇವತೆಗಳಿಗೆ ಸಹಾಯಮಾಡಿ ಹೇಗೆ ಜಯವನ್ನು ಗಳಿಸಿಕೊಟ್ಟನೋ ಹಾಗೆ ಈ ದೇಹದಲ್ಲಿ ನಡೆಯುವ ಯುದ್ಧದಲ್ಲಿ ವಿವೇಕ, ಜ್ಞಾನಾದಿಗಳಿಗೆ, ಹೃದಯದಲ್ಲಿ ಅಂತರ್ಗತನಾಗಿರುವ ಪರಮಾತ್ಮನು, ಸಹಾಯಮಾಡಿ, ಅರಿಷಡ್ವರ್ಗಗಳು ನಾಶವಾಗುವಂತೆ ನ್ಯಾಸವಿದ್ಯೆಯ ಮೂಲಕ ಮಾಡುವನು. ಇದಕ್ಕೆ ಉಪನಿಷತ್ತಿನ ಆಧಾರಗಳಿವೆ. ನ್ಯಾಸವಿದ್ಯೆಯು ಮೋಕ್ಷ ಸಾಧನವಾಗಿದೆ ಎಂದು ಶ್ರುತಿ, ಸ್ಮೃತಿ, ಇತಿಹಾಸಗಳು ಪ್ರತಿಪಾದಿಸಿವೆ.

ರಾಗದ್ವೇಷ ಮದ ಧಿಕ್ಕೈರಿಹ
ಮಹಾ ರಕ್ಷೋಭಿ, ರಕ್ಷೋದಿತಂ |
ನಿತ್ಯೇ ರಕ್ಷತಂಸ್ಥಿತೇ
ನಿಜಭರನ್ಯಾಸಾಭಿದಾನಂ ತತಃ ||
ಉತ್ಕರ್ಷೀಕೃತ ಮತ್ಕೃತೇನ
ವಿವಿಧಾರ್ಥ ಧರ್ಮಾನ ಧರ್ಮಧ್ರುವ |
ಸ್ತದ್ಭೂವರಾರ್ಣವ ಲೇಶ ವರ್ಣನಮಪಿ
ಪ್ರಾಚಾಂ ನವಾಚಾಂ ಪದಂ ||



# ದಿವ್ಯ ದಂಪತಿಗಳು

# ಅತ್ರಿ - ಅನಸೂಯಾ

ಪ್ರಜಾಪತಿಯು ಸಾಧ್ಯ ದೇವತೆಗಳ ಜೊತೆಗೆ ಮಾಡಿದ ತ್ರಿಸಂವತ್ಸರ ಯಜ್ಞಕ್ಕೆ ನುಡಿಯ ದೇವಿಯು ಪ್ರಸನ್ನಳಾಗಿ ತಾನಾಗಿ ನಡೆದು ಬಂದಳು. ವೈಯ್ಯಾರದಿಂದ ಆ ಮಾತಿನ ದೇವಿ ಕಣ್ಣಿಗೆ ಬಿದ್ದ ಕೂಡಲೇ ಪ್ರಜಾಪತಿಯ ಚಿತ್ತ ಚಂಚಲಿಸಿತು. ವರುಣನ ಹೃದಯ ವಿಕಾರ ವಶವಾಯಿತು. ಅವರೀರ್ವರ ಪ್ರೇಮದ್ರವವು ಗಾಳಿಗೆ ಹಾರಿ ಯಜ್ಞದ ಅಗ್ನಿಕುಂಡದಲ್ಲಿ ಬಿದ್ದಿತು. ಅಲ್ಲಿಯ ಬೆಂಕಿಯ ಉರಿನಾಲಿಗೆಯಿಂದ ಭೃಗು ರೂಪಗೊಂಡ, ನಿಗಿ ನಿಗಿ ಕಿಚ್ಚಿನಿಂದ ಅಂಗಿರಾ ಋಷಿಯು ವ್ಯಕ್ತನಾದ. ಕೆಂಡದ ಉಂಡೆಯಂತೆ ತೇಜೋಭಾಸುರವಾದ ಆ ಎರಡು ಅಂದ ಚಂದದ ಕಂದಮ್ಮಗಳನ್ನು ಕಂಡು ನುಡಿಯ ಒಡತಿಯಾದ ಆ ಮಹಾದೇವಿಗೆ ಇನ್ನೂ ಒಂದು ಅಂಥ ಬೆಳಕಿನ ಬೀಜದಂಥ ಮಗು ಬೇಕೆನಿಸಿತು. ಆಗ ಆ ಹೆಣ್ಣಿನ ಬಯಕೆಯನ್ನು ಅರಿತ ಬೊಮ್ಮ ಮೂರನೆಯ ಅಂಥ ಮಗುವೊಂದನ್ನು ನಿರ್ಮಿಸಿದ. ಅವನೊಬ್ಬ ಸಾಕ್ಷಾತ್ ಸೂರ್ಯನಂತಿದ್ದ. ಬ್ರಹ್ಮ ದೇವರ ಮಾನಸಕುವರನಾದ ಆ ತೇಜೋಬೀಜವೇ ಅತ್ರಿ. ಇದು 'ಬೃಹದ್ದೇವತೆ' ಯಲ್ಲಿಯ ಅತ್ರಿಯ ಉದ್ಭವದ ಸಮಾಚಾರ.

ವೇದಗಳ ವೇದಿಕೆಯಿಂದ ಪುರಾಣಗಳ ಪ್ರಪಂಚಕ್ಕೆ ಬಂದಾಗ ಅತ್ರಿಯ ಅವತಾರವೇ ಬೇರೆಯಾಗುತ್ತದೆ. ಬಗೆ ಬಗೆಯದೂ ಆಗುತ್ತದೆ.

ವಾಯುಪುರಾಣದಂತೆ ಅತ್ರಿಯು ಬ್ರಹ್ಮದೇವರ ಮಾನಸ ಪುತ್ರ. ಭಾಗವತ ನೋಡಿದರೆ ಬ್ರಹ್ಮದೇವರ ಕಣ್ಣಿನಿಂದ ಅವನ ಉತ್ಪತ್ತಿ. ಮತ್ಸ್ಯಪುರಾಣದ ಅಭಿಪ್ರಾಯದಂತೆ ಅತ್ರಿ ಚತುರ್ಮುಖನ ಕಿವಿಯ ಕೂಸು.

ಅತ್ರಿಋಷಿಗಳು ಪ್ರಜಾಪಕ್ಷಪಾತಿಗಳು. ಪ್ರಜೆಗಳನ್ನು ಶೋಷಣೆ ಮಾಡುವ ರಾಜರನ್ನು ಅವರು ಧಿಕ್ಕರಿಸುತ್ತಿದ್ದರು. ರಾಷ್ಟ್ರದಲ್ಲಿ ನ್ಯಾಯನಿಷ್ಠ ಹಾಗೂ ಧರ್ಮನಿಯಮಿತವಾದ ರಾಜ–ಪ್ರಜಾ ಉಭಯಸತ್ತಾತ್ಮಕ ರಾಜ್ಯ ಶಾಸನ ಪದ್ಧತಿಯಿರಬೇಕೆಂದು ಅವರು ನಿಖರವಾಗಿ ಪ್ರತಿಪಾದಿಸಿದರು. ಅದು ಅಂದಿನ ರಾಜರಿಗೆ ಬಹಳ ಕಹಿಯಾದ ತುತ್ತಾಗಿತ್ತು. ಅತ್ರಿಗಳು ತಮ್ಮ ಈ ಹೊಸರಾಜಕೀಯ ವಿಚಾರಧಾರೆಯಿಂದ ಜನರ ಮನಸ್ಸನ್ನು ಶಾಸನದ ವಿರುದ್ಧ ತಿರುಗಿಸಿ ಬಂಡೆಬ್ಬಿಸುತ್ತಿದ್ದಾರೆಂದು ನೆಪಹೂಡಿ ಅಂದಿನ ರಾಜರು ಅವರನ್ನು ಬಂಧಿಸಿ ಜೈಲಿನಲ್ಲಿಟ್ಟರು. ಪ್ರಜಾಕೋಟಿ ಕಲ್ಯಾಣಕ್ಕಾಗಿ ತಾವು ಅನುಭವಿಸಬೇಕಾಗಿ ಬಂದ ಕಾರಾಗೃಹವಾಸವನ್ನು ಅತ್ರಿ ಮುನಿಗಳು ಆನಂದದಿಂದ ಸ್ವಾಗತಿಸಿದರು. ಕಾರಾಗೃಹವಾಸಕ್ಕೂ ಜಗ್ಗದೇ ಸತ್ಯಾಗ್ರಹ ಮುಂದುವರೆಸಿದರು.

ಋಗ್ವೇದದ ಐದನೇ ಮಂಡಲ ಹಾಗೂ ಆರಣ್ಯಕ, ಬ್ರಾಹ್ಮಣ, ಪುರಾಣಗಳಲ್ಲಿಯೂ ಜಗತ್ತಿನ ಪ್ರಪ್ರಥಮ ಪ್ರಜಾಪಕ್ಷದ ಸತ್ಯಾಗ್ರಹಿ ಮಹಾತ್ಮ ಎಂದು ಈ ಮುನಿಗಳನ್ನು ಶ್ಲಾಘಿಸಲಾಗಿದೆ.

ಲೋಕದ ಕೂಗನ್ನು ಜಗತ್ತಿಗೆಲ್ಲ ತಿಳಿಯುವಂತೆ ದೊಡ್ಡ ದನಿಯಿಂದ ಘೋಷಣೆಗೈದು ದಶದಿಕ್ಕುಗಳಲ್ಲಿಯೂ ಜನತೆಯ ವಾಣಿಯು ದುಂದುಮಿಸಿ ಪ್ರತಿಧ್ವನಿಸುವಂತೆ ಮಾಡಿದ ಅತ್ರಿ ಋಷಿಗಳಿಗೆ ಆ ಕಾಲದಲ್ಲಿ "ಪಾಂಚಜನ್ಯ" ಎಂದು ಕರೆಯುತ್ತಿದ್ದರೆಂದು ಋಗ್ವೇದದ ಪ್ರಥಮ ಮಂಡಲದಲ್ಲಿ ಉಲ್ಲೇಖವಿದೆ.

ಅಂದಿನ ಆಡಳಿತ ಪಕ್ಷದವರು ತಮ್ಮ ಸರ್ವಾಧಿಕಾರತ್ವದ ವಿರುದ್ಧ ಆಂದೋಲನ ಆರಂಭಿಸಿದ ಅತ್ರಿಗಳ ಮೇಲಿನ ಸಿಟ್ಟಿನಿಂದ ಒಮ್ಮೆ ಈ ಮಹಾಮುನಿಯನ್ನು ನಿಗಿನಿಗಿ ಕೆಂಡಗಳು ಕಿಚ್ಚಾಡುವ ಅಗ್ನಿಕುಂಡದಲ್ಲಿ ಎತ್ತಿ ಒಗೆದರು. ಆಗ ಅತ್ರಿಗಳು ತಮ್ಮ ಮಂತ್ರ ಪ್ರಭಾವದಿಂದ ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸಿದರು. ಅವರು ಇವರನ್ನು ಆ ಕಾಡ್ಗಿಚ್ಚಿನಿಂದ ಕೂಡಲೇ ಪಾರು ಮಾಡಿದರು. ಹೀಗೆ ನ್ಯಾಯಕ್ಕಾಗಿ ಅತ್ರಿಗಳು ಅನೇಕ ಇಂಥ ಅಗ್ನಿದಿವ್ಯ ಮಾಡಿದ ಉದಾಹರಣೆಗಳು ವೈದಿಕವಾಙ್ಮಯವನ್ನು ಸೂಕ್ಷ್ಮವಾಗಿ ಸಂಶೋಧಿಸಿದವರಿಗೆ ಗೊತ್ತಾಗುತ್ತವೆ.

ಸಂತ್ರಸ್ತರ, ದೀನರ, ದಲಿತರ, ಸಂಕಷ್ಟ ನಿವಾರಣೆಗಾಗಿ ಅತ್ರಿಮಹರ್ಷಿ ಯಾವುದೇ ತ್ಯಾಗಕ್ಕೆ ಸದಾಸಿದ್ಧರಿರುತ್ತಿದ್ದರು. ಜನತೆಯ ಕಲ್ಯಾಣಕ್ಕಾಗಿ ಬಹು ಕಷ್ಟಪಟ್ಟು ಮಾಡಿದ ತಪಸ್ಸಿನ ಪುಣ್ಯಸರ್ವಸ್ವವನ್ನೆಲ್ಲ ಧಾರೆಯೆರೆಯಲು ಅವರೆಂದೂ ಹಿಂದೆ ಮುಂದೆ ನೋಡಿಲ್ಲ.

ಒಂದು ಸಲ ಹೈಹಯರಾಜರಿಗೂ ವಾಯುಮಂಡಲದವರಿಗೂ ಭೀಕರವಾದ ಕದನ ಆರಂಭವಾಯಿತು. ಹೈಹಯರು ಮೊದಲೇ ಬಲಿಷ್ಠರು. ರಾಹು ಕೇತುಗಳ ಸಹಾಯವೂ ಜೊತೆಗಿತ್ತು. ಮದೋನ್ಮತ್ತರಾಗಿ ಸೂರ್ಯಚಂದ್ರರನ್ನೇ ಸೆರೆಯಲ್ಲಿ ಬಂಧಿಸಿದರು ಎಲ್ಲೆಡೆ ಗಾಢ ಅಂಧಕಾರ ವ್ಯಾಪಿಸಿತು. ಜಗದ ಜನರೆಲ್ಲ ಕತ್ತಲೆಯಲ್ಲಿ ಯಾವ ವ್ಯವಹಾರಗಳೂ ಸಾಗದೇ ಗೋಳಾಡಹತ್ತಿದರು. ಬದುಕೇ ದುರ್ಭರವಾಗಿಬಿಟ್ಟಿತು

ಈ ಸಂದರ್ಭದಲ್ಲಿ ಸಹಾಯ ಮಾಡಬೇಕಾದ ದೇವಾಧಿದೇವತೆಗಳಿಗೂ ಅಸಹಾಯಕತೆ ಆವರಿಸಿತು. ಆಗ ತಪಶ್ಶಕ್ತಿಯ ತವನಿಧಿಯಂತಿದ್ದ ಅತ್ರಿ ಮುನಿಗಳಿಗೆ ಜೀವ ಜಂಗುಳಿಯು ತಮೋಲೋಕದಲ್ಲಿ ಬಿದ್ದು ಜೀವಂತ ಯಮಯಾತನೆ ಅನುಭವಿಸುತ್ತಿರುವುದನ್ನು ನೋಡಲಾಗಲಿಲ್ಲ.

ಅವರು ತಮ್ಮ ತಪಶ್ಶಕ್ತಿಯನ್ನೆಲ್ಲ ಪಣಕ್ಕೆ ಹಚ್ಚಿ ಗಗನಮಂಡಲದಲ್ಲಿ ಬೆಳಗಹತ್ತಿದರು. ಅವರ ತಪೋಭಾಸುರವಾದ ತೇಜಃಪುಂಜದಂತಿದ್ದ ಶರೀರ ಕಾಂತಿಯು ಸಾವಿರ ಚಂದ್ರ ಸೂರ್ಯರಂತೆ ಕಂಗೊಳಿಸಿ ತನ್ನ ಶಾಂತನಿರ್ಮಲವಾದ ದಿವ್ಯ ದೀಧಿತಿಗಳಿಂದ ದಶದಿಕ್ಕುಗಳಲ್ಲೆಲ್ಲ ತಿಂಗಳು ಬೆಳಕು ತುಂಬಿ ತುಳುಕಾಡುವಂತೆ ಮಾಡಿತು. ಪ್ರತಿಚಂದ್ರರಾಗಿ ಮೆರೆದರು.

ಆ ಚಂದ್ರನೂ ಸಹ ಅತ್ರಿಋಷಿಗಳ ಕಣ್ಬೆಳಕಿನ ಕೂಸಾಗಿ ಜನಿಸಿ ಅವರ ಅನುಗ್ರಹದಿಂದಲೇ ಜಗದಂಡ ಮಂಡಲವನ್ನೆಲ್ಲ ಬೆಳಗುವ ಬೆಳಕಿನ ಪಿಂಡವಾಗಿ ಗಗನಮಂಡಲದಲ್ಲಿ ಬೆಳಗುತ್ತಲಿರುತ್ತಾನೆ.

ಈ ಅತ್ಯದ್ಭುತವಾದ ಲೋಕೋಪಕಾರ, ಆಧ್ಯಾತ್ಮಿಕಶಕ್ತಿ, ತಪೋಬಲ ಇವನ್ನು ಕಂಡೇ ಅತ್ರಿಮುನಿಯು ಸಂತಾನಬಯಸಿದಾಗ ಹರಿಹರ ಬ್ರಹ್ಮಾದಿಗಳು ಇವರ ಉದರದಿಂದ ನಾಮುಂದೆ ತಾಮುಂದೆ ಎಂಬಂತೆ ಹುಟ್ಟಿಬಂದಿರುವರು. ಶ್ರೀ ವಿಷ್ಣುವಂತೂ ಅತ್ರಿಗಳು ಸಂತತಿ ಬೇಕೆಂದಾಗ ತನ್ನನ್ನೇ ಅವರಿಗೆ ಕೊಟ್ಟುಬಿಟ್ಟನಂತೆ. ತನ್ನನ್ನು ತಾನೇ ಅತ್ರಿಗಳಿಗೆ ದತ್ತು ಕೊಟ್ಟಿದ್ದರಿಂದ ಶ್ರೀ ವಿಷ್ಣುವು ದತ್ತ + ಆತ್ರೇಯ = ದತ್ತಾತ್ರೇಯ ಎಂದು ಅವತಾರ ಪ್ರಸಿದ್ಧನಾದ.

ಅತ್ರೇರಪತ್ಯಮಭಿಕಾಂಕ್ಷತ ಆಹ ಸಾಕ್ಷಾತ್'
ದತ್ತೋ ಮಯಾ ಹಮಿತಿ ಯದ್'
ಭಗವಾನ್ ಸದತ್ತಃ

ಎಂದು ಶ್ರೀಮದ್ಭಾಗವತದಲ್ಲಿ ಭಗವಾನ್‌ದತ್ತನು 'ಆತ್ರೇಯ' ಎಂದರೆ ಅತ್ರಿಯ ಮಗನಾಗಿ

ಶ್ರೀ ಪಂಡರೀನಾಥಾಚಾರ್ಯ ಗಲಗಲಿ

ಜನಿಸಿಹುವರ ಮರ್ಮವನ್ನು ನಿರೂಪಿಸಿದ್ದಾರೆ. ಇದರಂತೆ ಬ್ರಹ್ಮದೇವನು ಸೋಮನಾಗಿಯೂ ಮಹಾದೇವರು ದೂರ್ವಾಸರಾಗಿಯೂ ಹುಟ್ಟಿ ಆ ತ್ರಿಮೂರ್ತಿಗಳೂ ಅತ್ರಿಪುತ್ರರಾದರು.

ಒಂದೊಂದು ಮನ್ವಂತರದಲ್ಲೂ ಸಪ್ತರ್ಷಿಪದವಿಯನ್ನು ಪಡೆಯಬೇಕಾದರೆ ಅದ್ಭುತವಾದ ತಪಶ್ಶಕ್ತಿ ವಿಶೇಷ ಭದವದನುಗ್ರಹಗಳು ಅತ್ಯಾವಶ್ಯವಾಗಿದೆ. ಹೀಗಿರುವಾಗ ಅತ್ರಿಮುನಿಗಳು ಮಾತ್ರ ತಮ್ಮ ಲೋಕೋತ್ತರವಾದ ತಪೋಮಹಿಮೆಯಿಂದ ಸ್ವಾಯಂಭುವ ಮನ್ವಂತರದಲ್ಲಿ ಸಪ್ತರ್ಷಿಗಳ ಪಾವನಪಂಕ್ತಿಯನ್ನು ಅಲಂಕರಿಸಿ ಮತ್ತೆ ವೈವಸ್ವತ ಮನ್ವಂತರದಲ್ಲಿಯೂ ಸಪ್ತರ್ಷಿಗಳಾಗಿ ನಕ್ಷತ್ರಗಳ ಆ ದಿವ್ಯಕೊರಳ ಪದಕಹಾರದಲ್ಲಿ ಮತ್ತೆ ತಮ್ಮ ದಿವ್ಯ ದೀಪ್ತಿಯಿಂದ ಬೆಳಗಿದ್ದಾರೆ.

ಸ್ವಾಯಂಭುವ ಮನ್ವಂತರದಲ್ಲಿ ಇವರು ದಕ್ಷಪ್ರಜಾಪತಿಯ ಮಗಳಾದ ಅನಸೂಯೆಯನ್ನು ವಿವಾಹವಾಗಿದ್ದರು. ದಕ್ಷಯಜ್ಞದ ದುರಂತದಲ್ಲಿ ಇವರೂ ಶಿವಕೋಪಾಗ್ನಿಗೆ ತುತ್ತಾಗಿದ್ದರು. ಆದರೆ ಇವರ ಅರಿವು ಗರಿಮೆ ಮತ್ತು ತಪೋಮಹಿಮೆಗಳನ್ನು ಮನದಂದು ಶಂಕರನು ವೈವಸ್ವತ ಮನ್ವಂತರದಲ್ಲಿ ತಾನಾಗಿ ವರವಿತ್ತು ಅವರನ್ನು ಬದುಕಿಸಿ ತಾನೇ ಅವರ ಮಗನಾಗಿ ಜನಿಸಿದ.

ವೈವಸ್ವತಮನ್ವಂತರದಲ್ಲಿ ಕರ್ದಮಋಷಿಯು ತನ್ನ ಮಗಳಾಗಿ ಜನಿಸಿದ ಅದೇ ಅನಸೂಯೆಯನ್ನು ಅತ್ರಿ ಋಷಿಗೆ ಕೊಟ್ಟು ಮದುವೆಮಾಡಿದರು. ಸಾಧ್ವೀಕುಲ ರತ್ನವೆಂದು ಪ್ರಸಿದ್ಧಳಾಗಿ ಕಪಿಲ ನಾಮಕ ಪರಮಾತ್ಮನಿಗೆ ಜನ್ಮವಿತ್ತ ದೇವಹೂತಿಯ ಹೊಟ್ಟೆಯಿಂದ ಜನಿಸಿದ ಅನಸೂಯೆಯ ಪಾತಿವ್ರತ್ಯ ಮಹಿಮೆಯು ಅತ್ರಿಯ ತಪಸ್ಸಿನಷ್ಟೇ ಅತ್ಯುಜ್ವಲವಾಗಿದ್ದಿತು.

ಅನಸೂಯಾದೇವಿಯು ತನ್ನ ಹೆಸರಿಗೆ ತಕ್ಕಂತೆ ಅಸೂಯೆ, ಕೋಪ ಮುಂತಾದ ಸಹಜವಾದ ದುರ್ಗುಣಗಳನ್ನೆಲ್ಲ ಮೆಟ್ಟಿ ಮೇಲ್ಪಟ್ಟಿದ ಬದುಕು ನಡೆಯಿಸಿದಳು. ಇವಳ ಅಸಾಮಾನ್ಯವಾದ ಪಾತಿವ್ರತ್ಯ ಪ್ರಭಾವ ಹಾಗೂ ಅತ್ಯದ್ಭುತವಾದ ತಪಃಶಕ್ತಿಗಳನ್ನು ಕಂಡು ದೇವಲೋಕದ ಸುರಸತಿಯರ ಹೃದಯದಲ್ಲಿ ಅಸೂಯೆ ಹೊಗೆಯಾಡುತ್ತಿತ್ತು ಎಂದು ಪುರಾಣಗಳಲ್ಲಿ ಸೂಚನೆಗಳು ತೋರಿಬಂದಿವೆ.

ಒಮ್ಮೆ ತ್ರಿಮೂರ್ತಿಗಳ ಪತ್ನಿಯರಾದ ಲಕ್ಷ್ಮೀ, ಸರಸ್ವತೀ, ಪಾರ್ವತೀ ದೇವಿಯರು ಅನಸೂಯೆಯ ಪಾತಿವ್ರತ್ಯವನ್ನು ಪರೀಕ್ಷಿಸಬೇಕೆಂದು ತಮ್ಮ ಮೂವರು ಪತಿಗಳಿಗೆ ಬಿನ್ನವಿಸಿದರು. ಆಗ ಆ ತ್ರಿಮೂರ್ತಿಗಳು ಅತ್ರಿಋಷಿಗಳು ಆಶ್ರಮದಲ್ಲಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

## ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

## ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಇಲ್ಲದಾಗ ಅನಸೂಯೆಯು ಬಳಿಗೆ ಬಂದು 'ಹಾಯಿ ಹಸಿವೆಯಾಗಿದೆ' ಎಂದರು. ಆಗ ಅನಸೂಯೆಯು ಆ ಮೂವರನ್ನೂ ಸ್ವಾಗತಿಸಿ ಆನಂದದಿಂದ ಎಲೆ ಹಾಕಿ "ಊಟಕ್ಕೆ ಬನ್ನಿರಿ" ಎಂದು ಕರೆದಳು. ಆಗ ಅವಳ ಆತಿಥ್ಯ ಸೇವಾಧರ್ಮವನ್ನು ಒರೆಗೆ ಹಚ್ಚಬೇಕೆಂದು ಅವರು "ನಮಗೆ ಹುಟ್ಟಿದ ಮಹರ್ದಶೆಯಲ್ಲಿ ನೀನು ಬಡಿಸಿದರೆ ಮಾತ್ರ ನಾವು ಊಟಮಾಡುತ್ತೇವೆ. ಇಲ್ಲದಿದ್ದರೆ ಇಲ್ಲ. ನಿಮ್ಮ ಮಾನವಲೋಕದ ಬಟ್ಟೆ ನಮ್ಮ ಮಡಿಗೆ ಬರುವುದಿಲ್ಲ" ಎಂದರು. ಆದಕ್ಕೆ ಆ ಸಾಧ್ವೀಮಣಿಯು ಮುಗುಳುನಕ್ಕು "ಆಗಲಿ ಅದಕ್ಕೇನು! ವಿಶ್ವ ರಕ್ಷಕರುಗಳಾದ ನಿಮಗೆ ಕಾಣಿಸದಿರುವುದು ಯಾವುದಿದೆ! ಜಗಜ್ಜನಕನೆದುರು ನಾಚಿಕೆಯೆ! ಬನ್ನಿ, ಕುಳಿತುಕೊಳ್ಳಿ. ನೀವು ಹೇಳಿದಂತೆಯೇ ಬಡಿಸುವೆ" ಎಂದು ಹೇಳಿ ತನ್ನ ಪಾತಿವ್ರತ್ಯದ ಪ್ರಭಾವದಿಂದ ಮಂತ್ರಪೂತವಾದ ನೀರನ್ನು ಆ ತ್ರಿಮೂರ್ತಿಗಳ ಮೇಲೆ ಪ್ರೋಕ್ಷಿಸಿದಳು.

ಕ್ಷಣಾರ್ಧದಲ್ಲಿಯೇ ಬ್ರಹ್ಮ, ವಿಷ್ಣು, ಮಹೇಶ್ವರ ಮೂವರೂ ಸಣ್ಣ ಶಿಶುಗಳಾಗಿ ಪರಿವರ್ತಿತರಾದರು. ಅನಸೂಯೆಯು ದಿಗ್ದುಕೂಲವುಟ್ಟು, ಅವರಿಗೆ ಬಡಿಸಿ ತೃಪ್ತಿಗೊಳಿಸಿದಳು.

ಈ ಘಟನೆಯಿಂದ ಸಂತುಷ್ಟರಾದ ತ್ರಿಮೂರ್ತಿಗಳೂ ಹಾಗೂ ಅವರ ಸತಿಯರೂ 'ಮಹಾಸತಿ ಅನಸೂಯೆ' ಎಂದು ಅನಸೂಯೆಯ ಪಾತಿವ್ರತ್ಯವನ್ನು ತುಂಬುಹೃದಯದಿಂದ ಹರಸಿದರು.

ಅತ್ರಿಮುನಿಯು ದಿವ್ಯಜ್ಞಾನದ ಸುಪ್ರತೀಕದಂತಿದ್ದ. ಅವನಲ್ಲಿ ಸಾವಿರಾರು ಶಿಷ್ಯರು ಯಾವಾಗಲೂ ಓದುತ್ತಲೇ ಇದ್ದರು. ಅಷ್ಟು ಜನರಿಗೆಲ್ಲ ಹೊಟ್ಟೆಗೆ ಹಾಕಿ ಇಟ್ಟುಕೊಂಡು ವಿದ್ಯೆಯ ಭಂಡಾರವನ್ನೇ ಅವರ ತಲೆಯಲ್ಲಿ ತುಂಬಿ ಅವರನ್ನು ತಪೋಮೂರ್ತಿಗಳನ್ನಾಗಿಸಿ ಕಳುಹಿಸುತ್ತಿದ್ದರು.

ಈ ಎಲ್ಲ ಛಾತ್ರರ ಊಟದ ವ್ಯವಸ್ಥೆಯನ್ನು ಸ್ವಯಂ ಅನಸೂಯೆಯು ಆನಂದದಿಂದ ಮಾಡುತ್ತಿದ್ದಳು. ಅಂತಃಕರಣದುಂಬಿದ ಅವಳ ಆರೈಕೆಯಿಂದ ಆರೋಗ್ಯವಂತರಾಗಿ ನಿಶ್ಚಿಂತೆಯಿಂದ ಅಧ್ಯಯನ ನಡೆಯಿಸುತ್ತಲಿದ್ದ ಛಾತ್ರರೆಲ್ಲ ಅವಳನ್ನು 'ಮಾತಾ' ಎಂದೇ ತಿಳಿದು ಹಾಗೆಯೇ ಸಂಬೋಧಿಸುತ್ತಿದ್ದರು.

ಒಮ್ಮೆ ಈ ಗುರುಕುಲದಲ್ಲಿ ಧಾನ್ಯದ ಕೊರತೆ ತಲೆದೋರಿತು. ಪಾಠ – ಚಿಂತನೆಗಳಲ್ಲಿಯೇ ಮಗ್ನರಾಗಿದ್ದ ಅತ್ರಿಮುನಿಗಳಿಗೆ ಇತ್ತ ಗಮನವೇ ಇಲ್ಲ. ಋಷಿಪತ್ನಿಗೆ ಚಿಂತೆಯಾಯಿತು. "ಕೈಯಲ್ಲಿ ಕಾಸಿಲ್ಲ. ಉಗ್ರಾಣ ಬರಿದಾಗಿದೆ. ಪ್ರತಿನಿತ್ಯ ಇಷ್ಟೊಂದು ಛಾತ್ರರಿಗೆ ಊಟ ಒದಗಿಸುವ ಬಗೆಂತು? ಅನುಷ್ಠಾನಕ್ಕೆ ಕುಳಿತಿದ್ದ ಅತ್ರಿಮುನಿಗಳ ಹತ್ತಿರ ಬಂದು ಅವರ ಆಹ್ನಿಕ ಮುಗಿಯುವವರೆಗೆ ಕಾಯ್ದು, ಮುಗಿದ ಬಳಿಕ ಕೆಳಸ್ವರದಲ್ಲಿ ಮುನಿಗಳಿಗೆ ಮಾತ್ರ ಕೇಳುವಂತೆ ವಿನಮ್ರಳಾಗಿ ವಿಷಯ ತಿಳಿಸಿದಳು.

ಮುನಿಗಳು ವಿಚಲಿತರಾಗದೇ "ನನಗೆ ಈಗ ಪಾಠ ಹೇಳುವ ಸಮಯ. ನನ್ನ ಮನಸ್ಸೆಲ್ಲ ಅಲ್ಲಿದೆ. ಪಾಠಕ್ಕೆ ವಿಘ್ನಪಡಿಸಬೇಡ" ಎಂದುಬಿಟ್ಟರು. ಅನಸೂಯೆಯು ಪಾಠಮುಗಿದ ಬಳಿಕ ಮತ್ತೆ ಬಿನ್ನವಿಸಿದಳು. "ಸ್ವಾಮಿ ಹೆಣ್ಣುಮಗಳಾದ ನಾನು ಏನು ಮಾಡಲಿ! ದಯಮಾಡಿ ತಾವು ವೈಶ್ಯರಾಜನಲ್ಲಿಗೆ ಹೋಗಿ ಹಣಯಾಚನೆ ಮಾಡಿ ಹಣವನ್ನು ದೊರಕಿಸಿಕೊಂಡು ಬನ್ನಿರಿ. ಆಶ್ರಮದಲ್ಲಿ ಇದ್ದ ಮಕ್ಕಳ, ಬಂದ ಅತಿಥಿಗಳನ್ನು ಉಪವಾಸಕೆಡಿಸುವುದು ನನ್ನಿಂದಾಗದು" ಎಂದು ಬಿನ್ನವಿಸಿದಳು.

ಆಗ ಋಷಿಗಳು ಹಾಗೆಯೇ ಆಗಲಿ ಎಂದು ಆ ಕಾಲದ ಕೊಡುಗೈದೊರೆ ಎಂದು ಖ್ಯಾತನಾದ ವೈಶ್ಯರಾಜನಿದ್ದಲ್ಲಿಗೆ ಆಗಮಿಸಿದರು. ರಾಜರು ಹಾಗೆಯೇ ಕೈಬಿಚ್ಚುವರೇ! ಅತ್ರಿಮುನಿಗಳಿಗೆ ಇಷ್ಟವಿಲ್ಲದಿದ್ದರೂ ಹಣಸೊರಕಿಸಿಕೊಳ್ಳಲು ರಾಜನನ್ನು ಬಗೆಬಗೆಯಾಗಿ ಹೊಗಳಲಾರಂಭಿಸಿದರು. ಇಂದ್ರ, ಚಂದ್ರ, ವಿಷ್ಣು ಎಂದು ಬಗೆ ಬಗೆಯಾಗಿ ರಾಜನನ್ನು ಬಣ್ಣಿಸಿದರು. ಅಲ್ಲಿಯೇ ಕುಳಿತಿದ್ದ ಗೌತಮಋಷಿಗಳಿಗೆ ಸರಿಕಾಣಲಿಲ್ಲ. ಕೂಡಲೇ ಸಿಡಿದೆದ್ದ ಅವರು "ಅತ್ರಿಮುನಿಗಳೆ, ದ್ರವ್ಯದಾಶೆಯಿಂದ ನೀವು ಭಗವಂತನನ್ನು ಬಣ್ಣಿಸುವ ವಿಶೇಷಣಗಳನ್ನು ಮಾನವರಿಗೆ ಅನ್ವಯಿಸಿ ಹೊಗಳುತ್ತಿದ್ದೀರಿ. ಇದು ಸರಿಯಲ್ಲ. ಇದರಿಂದ ನೀವು ವೇದಗಳಿಗೆ ಪರಮಾತ್ಮನಿಗೂ ಅಪಚಾರವೆಸಗಿದಂತಾಗುವುದು. ಇದು ನಿಮಗೂ ತಿಳಿದಿರಲು ಸಾಕು" ಎಂದು ಗುಡುಗಿದರು.

ಅತ್ರಿಗಳು "ನನ್ನ ಉದ್ದೇಶವು ಸಾಧುವಾದುದು. ಅದನ್ನು ಈಡೇರಿಸಲು ಔಪಚಾರಿಕವಾಗಿ ನಾಕು ಒಳ್ಳೇ ವಿಶೇಷಣಗಳಿಂದ ರಾಜನನ್ನು ಹೊಗಳಿದ್ದು ತಪ್ಪಲ್ಲ" ಎಂದು ಸಂಕ್ಷೇಪವಾಗಿ ಉತ್ತರಿಸಿದರು.

ಆದರೆ ಗೌತಮರು ಇಷ್ಟಕ್ಕೇ ಸುಮ್ಮನಾಗಲಿಲ್ಲ. "ನಿಮ್ಮಂಥ ಮಹರ್ಷಿಗಳೇ ದುಡ್ಡಿನ ಆಶೆಗಾಗಿ ಈ ನರಮನುಷ್ಯರನ್ನು ಇಷ್ಟು ಏರಿಸಿದರೆ ಸಾಮಾನ್ಯರ ಪಾಡೇನು? "ರಾಜಾಧಿರಾಜ'' ಎಂದು ನೀವು ಹೊಗಳಿದಿರಷ್ಟೇ! ಈ ವಿಶೇಷಣವು ಇವನಿಗೆ ಅನ್ವಯಿಸದು. ಇಲ್ಲಿರುವ ರಾಜರೆಲ್ಲ ಕೇವಲ ರಾಜರು. ಇವರಿಗೆಲ್ಲ ಒಡೆಯನಾದ ಇಂದ್ರನು ಮಾತ್ರ ರಾಜಾಧಿರಾಜನಾಗಬಲ್ಲ. ಹೀಗಿರುವಾಗ ಇವನನ್ನೇ ರಾಜಾಧಿರಾಜ ಎಂದು ನೀವಂದಿದ್ದು ಸರ್ವಥಾ ಸರಿಯಲ್ಲ'' ಎಂದು ತೀವ್ರವಾಗಿ ವಾದಿಸಿದರು.

ಅತ್ರಿಮುನಿಗಳು ಸಿಟ್ಟಿಗೇಳಲಿಲ್ಲ. ಶಾಂತಸ್ವರದಲ್ಲಿಯೇ "ಹಾಗೆ ವಿಚಾರ ಮಾಡಿದರೆ 'ರಾಜಾಧಿರಾಜ' ಇಂದ್ರನೂ ಅಲ್ಲ. ಪರಮಮುಖ್ಯವೃತ್ತಿಯಿಂದ ಇಂದ್ರನಿಗೂ ಒಡೆಯನಾದ 'ಸರ್ವಲೋಕಾಧಿರಾಜ'ನಾದ ಶ್ರೀವಿಷ್ಣು ಓರ್ವನೇ 'ರಾಜಾಧಿರಾಜ' ಎಂಬ ಶಬ್ದಕ್ಕೆ ಅರ್ಹವ್ಯಕ್ತಿ. ಆದರೂ ಔಪಚಾರಿಕವಾಗಿ ಇಂದ್ರನನ್ನು ರಾಜಾಧಿರಾಜ ಎಂದು ಅಮುಖ್ಯ ವೃತ್ತಿಯಿಂದ ಕರೆಯುವಂತೆ, ನಾನೂ ಸಹ ವ್ಯವಹಾರಕ್ಕಾಗಿ ಈ ರಾಜನನ್ನು ರಾಜಾಧಿರಾಜ ಎಂದೆ. ಇದೊಂದು ಅರ್ಥವಾದ ಮಾತ್ರ" ಎಂದು ವಿವರವಾಗಿ ಸ್ಪಷ್ಟೀಕರಣ ನೀಡಿದರು.

ಗೌತಮರಿಗೆ ಸಮಾಧಾನವಾಗಲಿಲ್ಲ. ಚರ್ಚೆ ಕೊನೆಗೂ ಬಗೆಹರಿಯಲಿಲ್ಲ. ನ್ಯಾಯನಿರ್ಣಯಕ್ಕಾಗಿ ಸನತ್ಕುಮಾರರ ಬಳಿಗೆ ಈರ್ವರೂ ಹೋದರು. ಸನತ್ಕುಮಾರರು ಇಬ್ಬರ ವಾದವನ್ನೂ ಸಾವಧಾನವಾಗಿ ಕೇಳಿದರು. ಉತ್ತರಿಸಿದರು. "ನಾವಿಷ್ಣುಃ ಪೃಥಿವೀಪತಿಃ" ಎಂದು ಪ್ರಮಾಣವಿರುವುದರಿಂದ ಒಳ್ಳೇ ರಾಜರಲ್ಲಿ ಸಾಕ್ಷಾತ್ ಶ್ರೀವಿಷ್ಣುವಿನ ಸನ್ನಿಧಾನ ಇರುವುದರಿಂದ ಸದುದ್ದೇಶಕ್ಕಾಗಿ ಅಂತರ್ಯಾಮಿ ವಿವಕ್ಷೆಯಿಂದ ಅವರನ್ನು ಉತ್ತಮ ವಿಶೇಷಣಗಳಿಂದ ಬಣ್ಣಿಸಿದರೂ ತಪ್ಪಲ್ಲ" ಎಂದು ತೀರ್ಮಾನ ನೀಡಿದರು.

ಇದರಿಂದ ಇಬ್ಬರಿಗೂ ಸಮಾಧಾನವೆನಿಸಿತು. ವೈಶ್ಯರಾಜನಲ್ಲಿಗೆ ಮರಳಿದರು. ಮಹಾರಾಜನು ಅತ್ರಿಋಷಿಗಳಿಗೆ ರಾಶಿರಾಶಿಯಾಗಿ ಹಣಸುರಿದ. ಸ್ವೀಕರಿಸಿ ಅನುಗ್ರಹಿಸಬೇಕೆಂದು ಬಿನ್ನವಿಸಿದ. ಋಷಿಗಳು ಆ ಧನಸಂಪತ್ತನ್ನು ಆಶ್ರಮಕ್ಕೆ ತಂದು ತಮ್ಮ ಉಚಿತ ವಿದ್ಯಾಲಯವನ್ನು ಮುಂದುವರಿಸಿ ಅಭಿವೃದ್ಧಿಪಡಿಸಿದರು.

ಮತ್ತೊಮ್ಮೆ ದೇಶದಲ್ಲಿ ಎಲ್ಲೆಡೆಗೂ ಕ್ಷಾಮ ಕಾಣಿಸಿ ನೀರೇ ಇಲ್ಲದಾಗಿತ್ತು. ಮಳೆ ಬೆಳೆ ಹೋಗಿ ಕಾಳಿಲ್ಲದೇ ಕೂಳಿಲ್ಲದೇ ಜನಪ್ರಾಣ ಬಿಡಹತ್ತಿದರು. ಅತ್ರಿಋಷಿಗಳು ತಮ್ಮ ಏಕಾಂತ ಆಶ್ರಮದಲ್ಲಿ ತಪಃಸಮಾಧಿಯಲ್ಲಿಯೇ ಹೊರಗಿನ ಎಚ್ಚರವಿಲ್ಲದೇ ಅಸಂಪ್ರಜ್ಞಾತ ಸಮಾಧಿಯ ಅವಸ್ಥೆಯಲ್ಲಿ ಕುಳಿತುಬಿಟ್ಟಿದ್ದರು.

ಪ್ರಪಂಚದಲ್ಲಿಯ ಈ ಕ್ಷಾಮ ಕ್ಷೋಭೆಗಳನ್ನು ಕಂಡು ಅನಸೂಯೆಯ ತಾಯ್ಗರುಳು ಚುರುಕ್ ಎಂದಿತು. ಇಂಥ ಪರಿಸ್ಥಿತಿಯಲ್ಲಿ ಪತಿಯ ತಪೋಭಂಗವಾದರೂ ಚಿಂತೆಯಿಲ್ಲ ಎಂದು ಅವಳು ಅತ್ರಿಮುನಿಗಳನ್ನು ಸಮಾಧಿಯಿಂದ ಎಚ್ಚರಿಸಿದಳು.

ತಪಸ್ಸಿನ ತಾಪದಿಂದ ಎಚ್ಚೆತ್ತ ಅವರು 'ನೀರು ಕೊಡು' ಎಂದು ಕೇಳಿದರು. ಆಗ ಅನಸೂಯೆಯು ಜಗತ್ತಿನಲ್ಲಿ ನಡೆದ ಅನಾವೃಷ್ಟಿಯ ಹಾಹಾಕಾರದ ಬಗ್ಗೆ ತಿಳಿಸಿ "ಜನರೆಲ್ಲರೂ ಅನ್ನ ನೀರಿಲ್ಲದೇ

ಹಾರಿದಾರೆ. ಆವರಿಗೇನು ಗತಿ? ಎಂದು ಕೇಳಿದರು. ಆಗ ಮಹರ್ಷಿಗಳು "ದೇವ ಗಂಗೆಯನ್ನು ಪ್ರಾರ್ಥಿಸು" ಎಂದು ಹೇಳಿದರು. ಅವರ ಆಜ್ಞೆಯಂತೆ ಅನಸೂಯೆಯು ಮಂತ್ರಗಳನ್ನು ಪಠಿಸಿ ಬಿನ್ನವಿಸಿದಾಗ ಭಾಗೀರಥಿಯು ಪ್ರತ್ಯಕ್ಷಳಾಗಿ "ತಾಯಿ, ನೀನು ಮಹಾ ಪತಿವ್ರತೆ– ನೀನು ನೆಲ ಒತ್ತಿದಲ್ಲೆಲ್ಲ ನೀರು ಪುಟಿಯುತ್ತದೆ. ನೀನು ಬೇಕೆಂದಾಗೆಲ್ಲ ಭಾಗೀರಥಿಯಾದ ನಾನು ಪುಟಿದು ಮೇಲೆ ಬರುತ್ತೇನೆ" ಎಂದು ಹೇಳಿದಳು.

ಅದರಂತೆ ಅನಸೂಯಾದೇವಿಯು ಬೆರಳಿನಿಂದ ನೆಲ ಬಗೆದ ಕೂಡಲೇ ಗಂಗೆಯು ತರಂಗಿಸಿದಳು. ಆಗ ಅನಸೂಯೆಯು ಆ ಭಾಗೀರಥಿಗೆ "ತಾಯಿ ಒಂದು ತಿಂಗಳ ಪರ್ಯಂತ ನಮ್ಮ ನಾಡಿನಲ್ಲಿ ಹರಿದು ಜನರ ನೀರಡಿಕೆ – ಸಂತಾಪಗಳನ್ನು ಹಿಂಗಿಸು" ಎಂದು ಬೇಡಿಕೊಂಡಳು. ಅದರಂತೆ ಹರಿದು ಬಂದ ಆ ನೀರನ್ನು ತಂದು ಅತ್ರಿಮುನಿಗಳಿಗೆ ಕುಡಿಯಕೊಟ್ಟಾಗ ಅವರು ಅನಸೂಯೆಗೆ "ಪ್ರಿಯೆ, ನಾನೀವರೆಗೂ ಇಷ್ಟು ರುಚಿಯಾದ ನೀರನ್ನೇ ಕುಡಿದಿಲ್ಲ. ಇದು ಭೂಲೋಕದ ಅಮೃತ. ಆ ದೇವಗಂಗೆಗೆ ಇಲ್ಲಿಯೇ ಸ್ಥಿರವಾಗಿ ನೆಲೆಸಿ ಹರಿದು ಜನರನ್ನೆಲ್ಲ ಪಾವನಗೊಳಿಸಲು ಹೇಳು. ಈ ಲೋಕದ ಜನರಿಗೆ ಗಂಗೆಯ ನೀರು ಸ್ನಾನ–ಪಾನ ಬೆಳೆ ಭೋಗಗಳಿಗೆ ಲಭ್ಯವಾಗಲಿ" ಎಂದು ಹೇಳಿದರು. ಅದರಂತೆ ಅನಸೂಯೆಯು ಪ್ರಾರ್ಥಿಸಲಾಗಿ ದೇವಗಂಗೆಯು "ಋಷಿರಮಣಿ, ನೀನು ನಿನ್ನ ತಪಸ್ಸಿನಲ್ಲಿಯ ಒಂದುವರ್ಷದ ತಪಸ್ಸಿನ ಪುಣ್ಯವನ್ನು ನನಗೆ ಕೊಡುವುದಾದರೆ ನಾನು ಈ ಭೂಲೋಕದಲ್ಲಿ ಸ್ಥಿರವಾಗಿ ನೆಲೆಸುವೆನು" ಎಂದು ನುಡಿದಳು. ಆಗ ಅನಸೂಯಾದೇವಿಯು ತನ್ನ ಒಂದು ವರ್ಷದ ಕಠಿಣ ತಪಸ್ಸಿನ ಪುಣ್ಯರಾಶಿಯನ್ನೆಲ್ಲ ಆ ಸುರಸರಿತೆಗೆ ಧಾರೆಯೆರೆದು ಕೊಟ್ಟಳು. ಇದರಿಂದ ಆ ದಿವ್ಯಧಾರೆಯು ನಿರಂತರವೂ ಈ ನಾಡಿನಲ್ಲಿ ಪ್ರವಹಿಸುವಂತಾಯಿತು. ಈ ಕೃತ್ಯದಿಂದ ಪಾರ್ವತೀ ಪರಮೇಶ್ವರರೂ ಸಂತುಷ್ಟರಾಗಿ ಅತ್ರಿ ಅನಸೂಯೆಯರಿಗೆ ಪ್ರತ್ಯಕ್ಷ ದರುಶನವಿತ್ತು ವರಗಳನ್ನು ಕರುಣಿಸಿ ಅನುಗ್ರಹಿಸಿದರು. ಈ ಸ್ಥಳವೂ ಇಂದಿಗೂ 'ಅತ್ರೀಶ್ವರ' ಎಂದು ಪ್ರಸಿದ್ಧಸ್ಥಳವಾಗಿದೆ.

ರಾಮಸೀತೆಯರು ವನವಾಸದಲ್ಲಿ ಅತ್ರಿಋಷಿಗಳ ಆಶ್ರಮಕ್ಕೆ ಬಂದು ಅವರ ಆತಿಥ್ಯವನ್ನು ಸ್ವೀಕರಿಸಿದರು. ಕಾಡಿನಲ್ಲಿ ತಿರುಗಿದಣಿದು ಬಟ್ಟೆಯೆಲ್ಲ ಕೊಳೆಯಾದ ಜಾನಕಿಗೆ ಎರಡು ಹೂಗಂಧಮಾಲೆಗಳಿಂದ ಅಲಂಕಾರಮಾಡಿದಳು ಅನಸೂಯೆ ಕೊಟ್ಟ ಹೂವಿನ ಸರವು ಸೀತಾದೇವಿಗೆ ಹದಿನಾಲ್ಕು ವರ್ಷದ ವನವಾಸದಲ್ಲಿ ಒಮ್ಮೆಯೂ ಬಾಡಲಿಲ್ಲವಂತೆ ಅದರ ದಿವ್ಯಗಂಧವು ನಿರಂತರ ಗಮಗಮಿಸುತ್ತಿತ್ತೆಂದು ವಾಲ್ಮೀಕಿ ರಾಮಾಯಣದಲ್ಲಿ ಹೇಳಲಾಗಿದೆ.

ತ್ರಿಮೂರ್ತಿಗಳಲ್ಲದೇ ಅತ್ರಿಋಷಿಗಳಿಗೆ ಸೋಮ, ಆರ್ಯಮಾ ಎಂಬ ಇಬ್ಬರು ಮಕ್ಕಳಿದ್ದರೆಂಬುದು ಶಾಂತಿಪರ್ವದಲ್ಲಿ ಉಲ್ಲೇಖಿತವಾಗಿದೆ, ಅಲ್ಲದೇ ಆದಿಪರ್ವದಲ್ಲಿ ಅನೇಕ ಮಹರ್ಷಿಗಳು ಅತ್ರಿ ಪುತ್ರರೆಂದು ಹೇಳಲ್ಪಟ್ಟಿದ್ದಾರೆ. ಅಪರೆ ಬ್ರಹ್ಮಾಂಡ ಪುರಾಣದಲ್ಲಿ ಅತ್ರಿಋಷಿಗಳು ಉತ್ತಾನಪಾದರಾಜನನ್ನು ದತ್ತಕ ತೆಗೆದುಕೊಂಡರು ಎಂಬ ನಿರೂಪಣೆ ಇದೆ. ಮತ್ಸ್ಯಪುರಾಣದಲ್ಲಿ ಅತ್ರಿಮುನಿಯನ್ನು 'ಪೈತಿಮಹರ್ಷಿ' ಎಂದು ಕರೆದಿದ್ದಾರೆ. ವಾಯು ಪುರಾಣದಲ್ಲಿ ಅತ್ರಿಯು ಶಿವಾವತಾರನಾದ ಗೌತಮನ ಶಿಷ್ಯನೆಂದು ಹೇಳಿದ್ದಾರೆ. ಹರಿವಂಶ ಪುರಾಣದಲ್ಲಿ ಅತ್ರಿಮುನಿಯು ಹತ್ತೊಂಬತ್ತನೇ ದ್ವಾಪರದಲ್ಲಿ ವೇದವ್ಯಾಸರಾಗಿದ್ದರು ಎಂಬ ಬಣ್ಣನೆ ಇದೆ.

ಈಗ ನಮಗೆ ಅತ್ರಿ ಋಷಿಗಳ ಹೆಸರಿನಿಂದ ಅತ್ರಿ ಸಂಹಿತಾ, ಅತ್ರಿಸ್ಮೃತಿ ಎಂಬ ಎರಡು ಗ್ರಂಥಗಳು ಉಪಲಬ್ಧ ಮಾತ್ರವಿದೆ.

ಅತ್ರಿಸಂಹಿತೆಯಲ್ಲಿ ಒಂಬತ್ತು ಅಧ್ಯಾಯಗಳಿದ್ದು ನಾಲ್ಕುನೂರು ಶ್ಲೋಕಗಳಿವೆ. ಈ ಶ್ಲೋಕಗಳಲ್ಲಿ ಬಗೆಬಗೆಯ ಪಾಪಗಳಿಗೆಲ್ಲ ಪ್ರಾಯಶ್ಚಿತ್ತವನ್ನು ಹೇಳಿದ್ದು ಯೋಗ, ಜಪ, ತಪ, ಕರ್ಮ, ವಿಪಾಕ, ದ್ರವ್ಯಶುದ್ಧಿ ಮುಂತಾದ ವಿಷಯಗಳ ಬಗ್ಗೆ ಮಾರ್ಗದರ್ಶನವಿದೆ.

ಅತ್ರಿ ಸ್ಮೃತಿಯಲ್ಲಿಯೂ ಒಂಬತ್ತು ಅಧ್ಯಾಯಗಳಿದ್ದು ಅದರಲ್ಲಿ ಪ್ರಾಣಾಯಾಮ, ಜಪ, ಪಾಪಗಳ ವಿಷಯವನ್ನು ನಿರೂಪಿಸಿದ್ದಾರೆ ಮನುಸ್ಮೃತಿಕಾರರೂ ಸಹ ಅತ್ರಿಋಷಿಗಳ ಮತವನ್ನು ಅತ್ಯಂತ ಆದರದಿಂದ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಇವಲ್ಲದೇ ಲಘ್ವತ್ರಿಸ್ಮೃತಿ, ಬೃಹದಾತ್ರೇಯೀ ಸ್ಮೃತಿ ಎಂಬ ಎರಡು ಗ್ರಂಥಗಳೂ ಅತ್ರಿಋಷಿಗಳವೇ ಎಂಬುದನ್ನು ಸಾಧಾರಣವಾಗಿ ಸಾಧಿಸಲಾಗಿದೆ. ಮತ್ಸ್ಯಪುರಾಣದಲ್ಲಿ – 'ಅತ್ರಿಋಷಿಗಳು ಬರೆದ ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವೂ ಒಂದಿದೆ' ಎಂದು ಆ ಗ್ರಂಥದ ವಿಷಯವನ್ನು ಮತ್ಸ್ಯಪುರಾಣದಲ್ಲಿ ಪ್ರಸ್ತಾಪಿಸಲಾಗಿದೆ. ಆದರೆ ಈ ಗ್ರಂಥ ಇಂದಿನವರೆಗಂತೂ ಉಪಲಬ್ಧವಾಗಿಲ್ಲ.

ಅತ್ರಿವಂಶದಲ್ಲಿ ಅನೇಕ ಗೋತ್ರಕಾರರು ಜನಿಸಿದ್ದು ಮಂತ್ರದ್ರಷ್ಟಾರರೂ ಬಹುಸಂಖ್ಯೆಯಲ್ಲಿ ಗೋಚರರಾಗುತ್ತಾರೆ. 'ಅರ್ಚನಾನಸ, ಕರ್ಣಕ, ಪೂರ್ವಾತಿಥಿ, ಗವಿಷ್ಠಿರ, ಶ್ಯಾವಾಶ್ವ, ವಲ್ಗೂತಕ, ಶ್ಯಾಮಾವಾನ್', ನಿಷ್ಠುರ, ಅವಿಹೋತ್ರ, ಅರ್ಧಸ್ವನ, ಅರ್ಚನಸ ಮುಂತಾದ ಮಹರ್ಷಿಗಳು ಅವರಲ್ಲಿ ಪ್ರಮುಖರಾಗಿದ್ದಾರೆ.

ಮದುವೆಯ ಮಂಗಳ ಪ್ರಸಂಗದಲ್ಲಿ ನವವಧುವಿಗೆ ಮಾಡುವ ಆಶೀರ್ವಾದದ ಮಂತ್ರದಲ್ಲಿ ಮೊಟ್ಟಮೊದಲು "ಅತ್ರೇರ್ಯಥಾನಸೂಯಾ ಸ್ಯಾತ್" ಎಂದು ಅತ್ರಿ ಅನುಸೂಯೆಯರ ಉಲ್ಲೇಖ ಬರುತ್ತದೆ.

ಈ ದಂಪತಿಗಳು ವೈದಿಕ ವಿಶ್ವದಲ್ಲಿಯೂ ಪುರಾಣಪ್ರಪಂಚದಲ್ಲಿಯೂ ಪರಮಪವಿತ್ರ ದಂಪತಿಗಳೆಂದು ವಿಶ್ವಮಾನ್ಯರಾಗಿದ್ದಾರೆ. ★

ಧಾರಾವಾಹಿ

# ಭಾರತೀಯ ಪರಮಾರ್ಥ

## ಬ್ರಹ್ಮಾಂಡ-ಹದಿನಾಲ್ಕುಲೋಕ

**ಶ್ರೀ ಎಂ.ಓ.ಎಸ್. ಅಯ್ಯಂಗಾರ್**

ಕೇವಲ ತನ್ನ ಸಂಕಲ್ಪಮಾತ್ರದಿಂದಲೇ ಈಶ್ವರನು ಅನಂತಕೋಟಿ ಬ್ರಹ್ಮಾಂಡಗಳನ್ನು ಏಕಕಾಲದಲ್ಲಿ ಸೃಷ್ಟಿಸಿ ಪಾಲಿಸುತ್ತಿರುವನು ಎಂದು ಹಿಂದೆ ಹೇಳಿದೆವು. ಒಂದೊಂದು ಬ್ರಹ್ಮಾಂಡದಲ್ಲೂ ಹದಿನಾಲ್ಕು ಲೋಕಗಳಿರುವುವು. ಹಾಗೆ ಶಾಸ್ತ್ರಗಳಲ್ಲಿ ಹೇಳಿದೆ. ಒಂದು ಬ್ರಹ್ಮಾಂಡದ ವಿಸ್ತಾರ ವೆಷ್ಟು ಎಂಬುದನ್ನು ಶಾಸ್ತ್ರಗಳು ಈ ರೀತಿಯಾಗಿ ಹೇಳಿರುವುವು.

ಒಂದೊಂದು ಬ್ರಹ್ಮಾಂಡವೂ ಗೋಳ ರೂಪದಲ್ಲಿದ್ದು, ಐವತ್ತರಿಂದ ಎಪ್ಪತ್ತು ಕೋಟಿ ಯೋಜನ ಒಳಗಿನ ವ್ಯಾಸವುಳ್ಳದ್ದಾಗಿರುವುದು. ಭೂಮಿಯಿಂದ ಸೂರ್ಯನಿಗೆ ಒಂದುಲಕ್ಷಯೋಜನ ದೂರವಿರುವುದೆಂದು ಶಾಸ್ತ್ರಗಳು ಹೇಳುವುವು. ಇದರಿಂದ ಒಂದು ಯೋಜನದ ಅಳತೆ ಎಷ್ಟಿರಬಹುದೆಂದು ಈಗಿನ ವಿಜ್ಞಾನಿಗಳು ಊಹಿಸಬಹುದು.

ಒಂದೊಂದು ಬ್ರಹ್ಮಾಂಡದಲ್ಲೂ ನಮ್ಮ ಭೂಲೋಕದಿಂದ ಹಿಡಿದು (ಆದೂಸೇರಿ) ಮೇಲುಗಡೆ ಏಳುಲೋಕಗಳೂ, ಕೆಳಗಡೆ ಏಳು ಲೋಕಗಳೂ – ಒಟ್ಟುಹದಿನಾಲ್ಕು ಲೋಕಗಳಿರುವುವು. ಭೂಲೋಕದಲ್ಲಿ ಪಾದಚಾರಿಗಳಾದ ಮಾನವರೂ ಇತರ ಪ್ರಾಣಿಗಳೂ ಜಲಚರಗಳೂ ಇರುವುವು. ಮೇಲ್ಗಡೆ ಇರುವ ಲೋಕಗಳಲ್ಲಿ ಗಂಧರ್ವರು, ಕಿನ್ನರರು, ಕಿಂಪುರುಷರು, ಸುರರು, ಸ್ವರ್ಗಲೋಕವಾಸಿಗಳಾದ ಇಂದ್ರಾದಿ ದೇವತೆಗಳು, ಸನಕ ಸನಂದಾದಿ ಯೋಗಿವರೇಣ್ಯರೂ ವಾಸವಾಗಿದ್ದು, ಎಲ್ಲಕ್ಕಿಂತಲೂ ಮೇಲ್ಗಡೆ ಇರುವ ಸತ್ಯಲೋಕದಲ್ಲಿ ಬ್ರಹ್ಮ, ವಿಷ್ಣು, ಶಿವ ಇವರುಗಳ ಲೋಕಗಳಿರುವುವು. ಭೂಲೋಕದ ಕೆಳಗಡೆ ಇರುವ ಅಧೋಲೋಕಗಳಲ್ಲಿ ದೈತ್ಯರು, ದಾನವರು, ಪನ್ನಗರು, ಸುಪರ್ಣಾದಿಗಳು ವಾಸವಾಗಿರುವರು. ಹೆಚ್ಚಿನ ವಿವರಗಳಿಗೆ ಅವುಗಳನ್ನು ವಿವರಿಸುವ ಆಯಾ ಗ್ರಂಥಗಳನ್ನು ಓದಿ ಅರಿಯಬಹುದು.

ಅಸಂಖ್ಯಾತಗಳಾದ ಗ್ರಹ ನಕ್ಷತ್ರಾದಿಗಳೆಲ್ಲಾ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟು ತಮ್ಮ ತಮ್ಮ ಎಲ್ಲೆಗಳನ್ನು ಮೀರದೆ ಪರಮಾತ್ಮನ ನಿಯಮನ ಪ್ರಕಾರ ಸುತ್ತುತ್ತಿರುವುವು. "ದ್ಯೌಸ್ಸ ಚಂದ್ರಾರ್ಕ ನಕ್ಷತ್ರಂಖಂ ದಿಶೋಭೂರ್ಮಹೋದಧಿಃ। ವಾಸುದೇವಸ್ಯವೀರ್ಯೇಣ ವಿಧೃತಾನಿ ಮಹಾತ್ಮನಃ" ಎಂದರೆ ಚಂದ್ರಸೂರ್ಯಗ್ರಹ ನಕ್ಷತ್ರಗಳಿಂದ ತುಂಬಿರುವ ಆಕಾಶ, ದಿಕ್ಕುಗಳು, ಭೂಮಿ, ಮಹಾಸಮುದ್ರಗಳು ಇವೆಲ್ಲಾ ಪರಮಾತ್ಮನ ಸಂಕಲ್ಪ ಶಕ್ತಿಯಿಂದ ತಮ್ಮ ತಮ್ಮ ಎಲ್ಲೆಗಳನ್ನು ಮೀರದೆ ಅವವುಗಳ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುವುವು ಎಂದು ಶಾಸ್ತ್ರಗಳಲ್ಲಿ ಹೇಳಿರುವುದು.

ಅಂತರಿಕ್ಷದಲ್ಲಿ ದೇವಗಂಧರ್ವಾದಿ ಅನೇಕ ಜೀವರಾಶಿಗಳಿರುವರೆಂದು ಶಾಸ್ತ್ರಗಳಲ್ಲಿ ಹೇಳಿರುವುದು. ಅವರೆಲ್ಲರೂ ನಮ್ಮ ಕಣ್ಣಿಗೆ ಏತಕ್ಕೆ ಕಾಣಿಸುವುದಿಲ್ಲ? ಎಂದು ನಾವು ಪ್ರಶ್ನಿಸಬಹುದು. ಪರಮಾತ್ಮನ ವಿಚಿತ್ರಸೃಷ್ಟಿಗಳೆಲ್ಲವೂ ಮನುಷ್ಯನ ಬುದ್ಧಿಗೂ ದೃಷ್ಟಿಗೂ ಗೋಚರಿಸಲಾರವು. ಒಂದು ವಿಧದಲ್ಲಿ ಇದು ಹೇಗೆ ಎಂಬುದನ್ನು ಊಹಿಸಬಹುದು. ವಿಜ್ಞಾನಶಾಸ್ತ್ರರೀತ್ಯಾ ನಮ್ಮದೃಷ್ಟಿ ಶಬ್ದ ಪದಾರ್ಥಗಳೆಲ್ಲವೂ ಅಲೆಗಳ ರೂಪದಲ್ಲಿರುವ ಶಕ್ತಿಗಳೇ ಆಗಿರುತ್ತೀವೆ (Sound, Light, Heat etc are all froms of energy of different Wave lengths). ಮನುಷ್ಯರು ಕೇಳುವ, ನೋಡುವ ಮತ್ತು ಅವರ ಅನುಭವಕ್ಕೆ ಬರುವ ಶಬ್ದ – ಇತ್ಯಾದಿಗಳೆಲ್ಲವೂ ಕೆಲವು ನಿಯಮಿತ ಅಲೆಗಳ ಮಧ್ಯೆ (Man can recognise sound, light etc only between limits of two particular wave lengths) ಇರುವುದೆಂದೂ ಅದಕ್ಕೆ ಮೀರಿದ್ದನ್ನು ನಾವು ಗುರ್ತಿಸಲಾರೆವೆಂದೂ ಈಗಿನ ವಿಜ್ಞಾನಶಾಸ್ತ್ರಗಳಲ್ಲಿರುವುದಾಗಿ ಕೇಳಿರುವೆವು. (Beyond these limits of wave lengths man cannot comprehend heat, light etc energies). ಆದರಿಂದಲೇ ದೇವಗಂಧರ್ವಾದಿಗಳು ನಮ್ಮ ಕಣ್ಣಿಗೆ ಕಾಣುತ್ತಿಲ್ಲವೆಂದು ಊಹಿಸಬಹುದು. ಈ ಮೇಲಿನ ತರ್ಕವು ಸರಿಯಾಗಿಲ್ಲದಿರಬಹುದು. ಇದು ನನ್ನ ಊಹೆ. ಈಗ ಹಲವು ವರ್ಷಗಳಿಂದಲೂ ಪ್ರಪಂಚದಲ್ಲಿ ಅಲ್ಲಲ್ಲಿ ಈ ಹಾರುವತಟ್ಟೆ, (Flying saucers) ಗಳನ್ನು ನೋಡಿ ಅವು ಇತರ ಲೋಕಗಳಲ್ಲಿರುವ ಜೀವರುಗಳು ನಮ್ಮಭೂಮಿಯ ಮೇಲೆ ಪ್ರಯಾಣ ಮಾಡುತ್ತಿರಬಹುದೆಂಬ ಒಂದು ಊಹೆ ಇದೆ. ಈ ವಿಷಯವನ್ನು ಇಲ್ಲಿಗೆ ಸಾಕುಮಾಡಿ ಮುಂದುವರಿಯೋಣ.

### ಸ್ಥೂಲಮತ್ತು ಸೂಕ್ಷ್ಮ ಶರೀರಗಳ ವಿಚಾರ

ಮನುಷ್ಯನು ಜೀವಿಸಿರುವವರೆಗೂ ಉಸಿರಾಡುತ್ತಿದ್ದು ತನ್ನ ಕಾರ್ಯವ್ಯವಹಾರಗಳನ್ನು ನಿರ್ವಹಿಸುತಿದ್ದು ಒಂದುದಿನ ಸಾಯುವನು. ಸಾಯುವುದು ಎಂದರೆ ಏನು ? ಹುಟ್ಟಿದಾರಂಭದಿಂದಲೂ ಉಸಿರಾಡುತ್ತಿದ್ದು ಸತ್ತಕೂಡಲೇ ಉಸಿರಾಡುವುದು ನಿಂತು ಹೋಗುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಅವನ ಪ್ರಾಣ ಶರೀರವನ್ನು ಬಿಟ್ಟು ಹೋಯಿತು; ಅದರೊಡನೆ ಉಸಿರಾಡುವುದೂ ನಿಂತು ಹೋಯಿತು – ಎಂದು ಜನ ಸಾಮಾನ್ಯವು ಹೇಳುವುದು. ಅವನ ಆತ್ಮವು ಶರೀರವನ್ನು ತ್ಯಜಿಸಿ ಹೊರಟು ಹೋಯಿತು ಎಂದು ಕೆಲವರು ಹೇಳುವರು. ಒಬ್ಬ ಡಾಕ್ಟರು ಅವನನ್ನು ಪರೀಕ್ಷಿಸಿ ಹೃದಯ ಕ್ರಿಯೆಯು ನಿಂತು ಹೋಗಿರುವುದನ್ನು ಕಂಡು ಅವನು ಸತ್ತು ಹೋದನು ಎನ್ನುವನು. ಜೀವಿಸಿರುವಾಗ ಅವನ ಶರೀರದಲ್ಲಿದ್ದ ಯಾವವಸ್ತು ಈಗ ಶರೀರವನ್ನು ತ್ಯಜಿಸಿ ಹೊರಟು ಹೋಯಿತು? ನಮ್ಮ ಪೂರ್ವಿಕರಾದ ಮಹರ್ಷಿಗಳು ತಮ್ಮ ತ[illegible] ಶಕ್ತಿಯಿಂದ ಅದನ್ನು ಅರಿತು ಶಾಸ್ತ್ರಗಳ ಮೂ[illegible] ಈರೀತಿಯಾಗಿ ಹೇಳಿರುವರು

ಮನುಷ್ಯನ ಸ್ಥೂಲ (Gross) ಶರೀರದೊಳಗೆ ಸೂಕ್ಷ್ಮ (Subtle) ಶರೀರವೊಂದಿರುವುದು. ಅದು ಈಗಿನ ವಿಜ್ಞಾನಿಗಳಿಗೆ ಅಗೋಚರವಾಗಿರುವುದು. ಈ ಸೂಕ್ಷ್ಮ ಶರೀರದಲ್ಲಿ ಐದುಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು, ಪ್ರಾಣ ಮತ್ತು ಸ್ಥೂಲ ಶರೀರಕ್ಕೆ ಬೀಜರೂಪದಲ್ಲಿ

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ

ಎ. ಶಶಿಕಾಂತ್
1949, ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್. ವಿ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ದಿಕಟ್ಟೆ ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎಸ್.ಕೆ. ರಸ್ತೆ
ಬಂಗಾರಪೇಟೆ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳಿ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜಿ.ಎಸ್. ರಾಮಮೂರ್ತಿ
C/O ಜಿ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟ್ಯಾಂಡ್‌ರೋಡ್
ಗಂಗಾವತಿ.

ಎಸ್. ಜಯರಾಂ
731, 8 ಕ್ರಾಸ್ 2ನೇ ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2ನೇ ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜೆ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

ಅಣುಸ್ವರೂಪದಲ್ಲಿರುವ ಐದು ಭೂತಸೂಕ್ಷ್ಮಗಳು ಇವಿಷ್ಟೂ ಸೇರಿರುವುದು. ಇವುಗಳಲ್ಲಿ ಹತ್ತು ಇಂದ್ರಿಯಗಳು, ಮನಸ್ಸು-ಈ ಹನ್ನೊಂದೂ ಅತಿ ಶ್ರಾದ ಸಾತ್ವಿಕಾಹಂಕಾರ ತತ್ತ್ವದಿಂದ ಉಂಟಾದವುಗಳೆಂದು, ಹಿಂದೆಯೇ ಹೇಳಿರುವುದು. ಭೂತ ಸೂಕ್ಷ್ಮಗಳುಚಿತತ್ತ್ವದ ತಾಮಸಾಹಂಕಾರತತ್ತ್ವ ದಿಂದ ಉಂಟಾದ ಪಂಚಭೂತಗಳ ಸೂಕ್ಷ್ಮಾಣು (ತನ್ಮಾತ್ರ) ರೂಪಗಳು. ಪ್ರಾಣ ವೆಂಬುವುದು "ನಾರಾಯಣಾತ್ಪ್ರಾಣೋ ಜಾಯತೇ" ಎಂಬು ಶ್ರುತಿವಾಕ್ಯರೀತ್ಯಾ ಪರಮಾತ್ಮನಿಂದ ಶರೀರ ಪೋಷಣೆಗಾಗಿ ಅನುಗ್ರಹಿಸಲ್ಪಟ್ಟು, ಸೂಕ್ಷ್ಮಾಣು ರೂಪದಲ್ಲಿರುವ ಒಂದುಶಕ್ತಿ ವಿಶೇಷವು. ಈಪ್ರಾಣ ವಿಲ್ಲದಿದ್ದರೆ ಯಾವ ಇಂದ್ರಿಯಗಳಿಗೂ ಪಟುತ್ವವಿರದು. ಈ ಸೂಕ್ಷ್ಮಶರೀರದ ಭಾಗಗಳೊಂದೊಂದೂ ಅಣುಸ್ವರೂಪದಲ್ಲಿದ್ದು ಮೊತ್ತ ಸೂಕ್ಷ್ಮ ಶರೀರವು ಕಣ್ಣಿಗಾಗಲಿ ಭೂತಯಂತ್ರಗಳಿಗಾಗಲಿ (Biggest Microscope) ಕಾಣಿಸುವುದಿಲ್ಲ.

ಸೃಷ್ಟಿ ಮೊದಲು ಆರಂಭವಾದಾಗ ಪರಮಾತ್ಮನು ಒಂದೊಂದುಶುದ್ಧಾತ್ಮವನ್ನೂ ಒಂದೊಂದು ಪ್ರಾಕೃತವಾದ ಈ ಸೂಕ್ಷ್ಮ ಶರೀರವೆಂಬ ಚೀಲದಲ್ಲಿ (Sheath) ಬಂಧಿಸಿಟ್ಟು, ಪ್ರಕೃತಿ ಗರ್ಭದಲ್ಲಿಡುವನು. ಈ ಪ್ರಕೃತಿಯ ಆವರಣ ದಿಂದಾಗಿ ಕ್ರಮವಾಗಿ ಜೀವನು ಆ ಪ್ರಕೃತಿಯ ಗುಣಗಳನ್ನು ಎಂದರೆ ಮಹತ್ತಿನಿಂದ ಬುದ್ಧಿ, ಅಹಂಕಾರ ತತ್ತ್ವದಿಂದ ಅಹಂಭಾವ (Egoism)ಸತ್ವರಜಸ್ತಮೋ ಗುಣಗಳು ಇತ್ಯಾದಿಗಳನ್ನು ತನ್ನಲ್ಲುಂಟಾದಂತೆ ಭಾವಿಸಿ ಕೊಂಡು ತನ್ನ ಸ್ವಭಾವವಾದ ದಿವ್ಯ ಜ್ಞಾನ, ಆನಂದಾದಿಗಳನ್ನು ಕಳೆದು ಕೊಳ್ಳುವನು. ಆಗ ಅವನಿಗೆ ಜೀವಾತ್ಮನೆಂದು ಹೆಸರು; ಜೀವಿ ಎಂದೂ ಕರೆಯುವುದುಂಟು; ಎಂದರೆ ಸೂಕ್ಷ್ಮ ಶರೀರದೊಳಗೆ ಬಂಧಿಸಿಡಲ್ಪಟ್ಟ ಶುದ್ಧಾತ್ಮ. ಈ ಸೂಕ್ಷ್ಮ ಶರೀರದ ಮುಸುಕನ್ನು (Sheath) ಭತ್ತದಮೇಲಿನ ಹೊಟ್ಟಿಗೆ ( Covering ) ಹೋಲಿಸಬಹುದು. ಅದುಭತ್ತವಾಗಿರುವ ವರೆಗೂ ಭೂಮಿಯಲ್ಲಿ ಎಲ್ಲಿ ನಾಟಿದರೆ ಅಲ್ಲಿ ಗಿಡವಾಗಿ ಬೆಳೆಯುವುದು. ಹೊಟ್ಟನ್ನು ಸುಲಿದು ತೆಗೆದು ಬಿಟ್ಟರೆ ಅದು ಗಿಡವಾಗಿ ಬೆಳೆಯಲಾರದು.

ಸೂಕ್ಷ್ಮ ಶರೀರದೊಡನಿರುವ ಜೀವನು ಪುರುಷನ ಆಹಾರದೊಡನೆ ಅವನ ಶರೀರವನ್ನು ಸೇರಿ ಅವನ ರೇತಸ್ಸಿನ ಮೂಲಕ ಸ್ತ್ರೀ ಗರ್ಭ ಕೋಶವನ್ನು ಪ್ರವೇಶಿಸುವನು. ಈ ಜೀವಾತ್ಮನು ಸ್ತ್ರೀಗರ್ಭದಲ್ಲಿ ಸ್ಥೂಲ ಶರೀರವನ್ನು ಪಡೆದು ಶಿಶುವಾಗಿ ಜನಿಸುವನು.

ಸ್ಥೂಲಶರೀರದಲ್ಲಿರುವ ಮನುಷ್ಯನು ಫಲಾಪೇಕ್ಷೆಯಿಂದ ಮಾಡುವ ಕಾರ್ಯ ಎಂದರೆ ಕರ್ಮಗಳೆಲ್ಲವೂ ಒಳ್ಳೆಯದು, ಕೆಟ್ಟದ್ದು ಎಂದು ಎರಡು ವಿಧವಾಗಿದ್ದು, ಅದರ ಫಲವಾಗಿ ಪುಣ್ಯಪಾಪಗಳು ಸೇರಿ ಕೊಳ್ಳುವುವು ಅವುಗಳ ಫಲವಾಗಿ ಮುಂದೆ ಒಳ್ಳೆ ಕಾರ್ಯಗಳಿಂದ ಸುಖವನ್ನೂ, ಕೆಟ್ಟಕಾರ್ಯ ಗಳಿಂದ ಕಷ್ಟವನ್ನೂ ಅನುಭವಿಸಬೇಕಾಗುವುದು. ಅವುಗಳ ಜೊತೆಗೆ ಕೆಟ್ಟ ಕಾರ್ಯಗಳ ಫಲವಾಗಿ ಅವನ ಮನಸ್ಸು ದುರ್ವಾಸನೆ (ಎಂದರೆ ರಾಜಸ ತಾಮಸಗುಣ) ಗಳಿಂದ ಕೂಡಿಕೊಳ್ಳುವುದು. ಒಳ್ಳೆಯ ಕಾರ್ಯಗಳಿಂದ ಮನಸ್ಸು ಪರಿಶುದ್ಧವಾಗಿ ಸಾತ್ವಿಕಗುಣ, ಸುಜ್ಞಾನ ಇವುಗಳೊಡನೆ ಕೂಡಿ ಕೊಳ್ಳುವುದು. ಮನಸ್ಸಿನಲ್ಲಿ ಸೇರಿಕೊಳ್ಳುವ ಅನುಭವಗಳಿಗೆ 'ವಾಸನೆ'ಯೆನ್ನುವರು. ಹೀಗೆ ಅನಂತಾನಂತ ಜನ್ಮಗಳ ಕರ್ಮಫಲಗಳು ವಾಸನಾ ರೂಪದಲ್ಲಿ ಅವನ ಸೂಕ್ಷ್ಮಶರೀರದಲ್ಲಿ ಅಡಗಿರುವುವು ಜೀವಿತ ಕಾಲದಲ್ಲಿ ಅನುಭವಿಸುವ ವಿವಿಧ ಸುಖಗಳು ಆಯಾ ಸುಖ ವಿಷಯಗಳಲ್ಲಿ ರುಚಿಯನ್ನು ಹುಟ್ಟಿಸಿ ಇನ್ನೂಹೆಚ್ಚಾಗಿ ಸುಖವನ್ನು ಅನುಭವಿಸಬೇಕೆಂಬ ಆಸೆಯನ್ನು (ದಾಹರೂಪದಲ್ಲಿ) ಉಂಟುಮಾಡುವುದು. ಕೋರಿಕೆಗಳೂ;ಆಸೆಗಳೂ ಅವುಗಳ ಅನುಭವಗಳಿಂದ ಹೆಚ್ಚುತ್ತಾ ಹೋಗುವುವೇ ವಿನಾ ತಗ್ಗುವುದಿಲ್ಲ. ಈ ಅಭಿಲಾಷೆ ಗಳನ್ನು ನೆರವೇರಿಸಿ ಕೊಳ್ಳುವುದಕ್ಕೆ ಮಾನವನು ಮಾಡುವ ಕಾರ್ಯಗಳಲ್ಲಿ ಒಳ್ಳೆಯದು, ಕೆಟ್ಟದ್ದು ಎಂದು ಎರಡು ವಿಧವಾಗಿರುವುದು. ಸೃಷ್ಟಿಯ ನಿಯಮದಪ್ರಕಾರ ಒಳ್ಳೆ ಕರ್ಮಗಳಿಗೆ ಒಳ್ಳೆ ಫಲವೂ ಕೆಟ್ಟಕರ್ಮಗಳಿಗೆ ಕೆಟ್ಟಫಲವೂ ಅವನಿಗಾಗಿ ಕಾದಿರುವುವು. ಮನುಷ್ಯನು ಅನುಭವಿಸುವ ಕಷ್ಟಸುಖಗಳಿಗೆಲ್ಲಾ ಈ ಕರ್ಮಗಳೇ ಕಾರಣ. ಕರ್ಮದ ವಿಚಾರವು ಮುಂದೆ ಚರ್ಚಿಸಲ್ಪಡುವುದು.

ಮರಣ :– ಆಯಾಜನ್ಮದಲ್ಲಿ ಅನುಭವಿಸ ಬೇಕಾದ ಕರ್ಮಫಲಗಳನ್ನು ಅನುಭವಿಸಿ ಮುಗಿಸಿದ ಕೂಡಲೆ ಜೀವನು ಆ ಶರೀರವನ್ನು ತ್ಯಜಿಸುವನು. ಅದೇ ಅವನ ಮರಣಕಾಲ. ಮರಣಕಾಲ ಸಮೀಪಿಸಿದಾಗ ಅಂತರ್ಯಾಮಿಯಾಗಿರುವ ಪರಮಾತ್ಮನ ಕರೆ (Call) ಬರುವುದು. ಆಗ ಆ ಜೀವನ ಶರೀರದಲ್ಲಿ ರುವ ಸೂಕ್ಷ್ಮವಾದ ಇಂದ್ರಿಯ ಗಳೆಲ್ಲವೂ ತಮ್ಮ ತಮ್ಮ ಕಾರ್ಯಗಳನ್ನು ನಿಲ್ಲಿಸಿ ಹೃದಯಾಭಿಮುಖವಾಗಿ ಪ್ರಯಾಣಮಾಡುವುವು ಒಂದು ಕಾರ್ಖಾನೆಯಲ್ಲಿ (Factory) ಆ ದಿವಸದ ಕಾರ್ಯಮುಗಿದು ಗಂಟೆ (Syron) ಬಾರಿಸಿದ ಒಡನೆಯೇ ಕೆಲಸಗಾರರೆಲ್ಲಾ ತಮ್ಮ ತಮ್ಮ ಕಾರ್ಯಗಳನ್ನು ನಿಲ್ಲಿಸಿ ಹೊರಕ್ಕೆಹೊರಡುವು ದಿಲ್ಲವೇ ! ಹಾಗೆ.

ಮೊದಲು ಶರೀರದ ಕೈಕಾಲುಗಳು ಇದರಿಂದ ತಣ್ಣಗಾಗಿ ಶವಸ್ವರೂಪವಾಗುವುವೆ. ಎಲ್ಲಾ ಇಂದ್ರಿಯಗಳೂ ತಮ್ಮ ತಮ್ಮ ಕಾರ್ಯವನ್ನು ನಿಲ್ಲಿಸಿ ಹೃದಯದಲ್ಲಿರುವ ಮನಸ್ಸಿನಲ್ಲಿ ಹೋಗಿ ಸೇರಿಕೊಳ್ಳುವುವು. ಅವ್ಯಕ್ತಿಗೆ ಮಾತು ನಿಂತು ಹೋಗುವುದು, ಕಣ್ಣು ತೆರೆದಿದ್ದರೂ ಏನೂ ಕಾಣುವುದಿಲ್ಲ ಕಿವಿಕೇಳಿಸುವುದಿಲ್ಲ. ಸ್ಥೂಲ ಇಂದ್ರಿಯಗಳೆಲ್ಲಾ ಸತ್ತು ಬೀಳುವುವು. ಇಂದ್ರಿಯಗಳೊಡನೆ ಕೂಡಿ ಮನಸ್ಸು ಪ್ರಾಣನಲ್ಲೂ ಆ ಪ್ರಾಣವು ಭೂತ ಸೂಕ್ಷ್ಮಗಳೊಡನೆ ಸೇರಿ ಮೊತ್ತ ಸೂಕ್ಷ್ಮಶರೀರವು ಜೀವಾತ್ಮನಲ್ಲಿ ಆವರಿಸಿ ನಿಲ್ಲುವುದು. ಸೂಕ್ಷ್ಮ ಶರೀರದೊಡನೆ ಜೀವಾತ್ಮನು ಪರಮಾತ್ಮನಲ್ಲಿ ಹೋಗಿಸೇರುವನು. ಆಗ ಜೀವಾತ್ಮನಿಗೆ ಗಾಢ ನಿದ್ರಾವಸ್ಥೆ ಯೇರ್ಪಡುವುದು. ಪರಮಾತ್ಮನೊಡನೆ ಕೂಡಿ ಜೀವಾತ್ಮನು ಸ್ಥೂಲ ಶರೀರವನ್ನು ತ್ಯಜಿಸಿ ಹೊರಟು ಹೋಗುವನು. ಆಗ ಅದು ನಿಜವಾದ ಮರಣವೆನಿಸುವುದು. ಆ ಜೀವನಲ್ಲಿ ಅಲ್ಲಿಯವರೆಗೂ ಅನುಭವಿಸಿ ಮಿಕ್ಕಿರುವ ಪುಣ್ಯ, ಪಾಪ ರೂಪವಾದ ಕರ್ಮಗಳು, ಅವನ ಅನುಭವಗಳು ಅವನ ಸತ್ಕಾರ್ಯಗಳ ಫಲವಾಗಿ ಅವನು ತನ್ನಲ್ಲಿ ಬೆಳೆಸಿ ಕೊಂಡಿರುವ ಒಳ್ಳೆಯ ಗುಣಗಳು, ಜ್ಞಾನ ಭಕ್ತಿಗಳೆಲ್ಲವೂ ವಾಸನಾ ರೂಪದಲ್ಲಿ ಅವನ ಸೂಕ್ಷ್ಮಶರೀರದಲ್ಲಿ ಸೇರಿಕೊಂಡಿರುವುವು. ಅದೇ ರೀತಿಯಲ್ಲಿ ಅವನ ದುಷ್ಕಾರ್ಯಗಳ ಫಲವಾಗಿ ಬೆಳೆಸಿ ಕೊಂಡಿರುವ ದುರ್ಗುಣಗಳೂ ಸೇರಿ ಕೊಂಡಿರುವುವು ಇವನ್ನೇ ಸಂಸ್ಕಾರವೆಂದೂ ವಾಸನೆಯೆಂದೂ ಕರೆಯುವರು.

ಸಾಂಸಾರಿಕನಾದ ಜೀವನೆಂದರೆ (ಎಂದರೆ ನಾವೆಲ್ಲರೂ)ಕರ್ಮವಾಸನೆ ಗಳಿಂದ ಕೂಡಿ ಕೊಂಡಿರುವ ಸೂಕ್ಷ್ಮ ಶರೀರವೆಂಬ ಚೀಲದಲ್ಲಿ ಅಡಗಿರುವ ಆತ್ಮ ಎಂಬುದನ್ನು ಎಲ್ಲರೂ ಗಮನಿಸಬೇಕು. ಅವನ ಮುಂದಿನ ಜನ್ಮದಲ್ಲಿ ಈ ಸೂಕ್ಷ್ಮ ಶರೀರ ದೊಡನೆಯೇ ಪುರುಷನ ಶರೀರವನ್ನು ಅವನ ಆಹಾರದೊಡನೆ ಸೇರಿದಾಗ ಅಲ್ಲಿ ಸ್ಥೂಲ ಶರೀರವು ಬೆಳೆಯುವುದು. ಮನುಷ್ಯನು ಪಾಪಿಷ್ಠನಾಗಿದ್ದು ಬಹಳಪಾಪಮಾಡಿದ್ದರೆ ಮೃಗವಾಗಿ ಹುಟ್ಟುವನು. ಆ ಸಂದರ್ಭಗಳಲ್ಲಿ ಈ ಜೀವಾತ್ಮನು ಸೂಕ್ಷ್ಮಶರೀರ ದೊಡನೆ ಆ ಮೃಗಪಕ್ಷಿಗಳ ಪುರುಷ ಶರೀರದಲ್ಲಿ ,ಆಹಾರ ರೂಪದಲ್ಲಿ ಸೇರಿ ರೇತಸ್ಸಿನ ಮೂಲಕ ಆಯಾ ಸ್ತ್ರೀ ರೂಪ ಗರ್ಭಗಳಲ್ಲಿ ಸೇರಿ ಆಯಾ ಸ್ಥೂಲಶರೀರ ಗಳನ್ನು ಅಲ್ಲಲ್ಲಿ ಪಡೆದು ಹುಟ್ಟುವನು. ಅತಿ ಪಾಪಿಷ್ಠನಾಗಿದ್ದರೆ ಕ್ರಿಮಿ ಕೀಟಾದಿಗಳಾಗಿಯೋ ಮರಗಿಡಗಳಾಗಿಯೋ ಹುಟ್ಟುವನು.

ಹೀಗೆ ಒಂದೊಂದು ಶರೀರದಲ್ಲೂ ತನ್ನ ಸೂಕ್ಷ್ಮ ಶರೀರದೊಡನಿದ್ದು ಅದನ್ನು ತ್ಯಜಿಸುವಾಗ ಸೂಕ್ಷ್ಮ ಶರೀರದೊಡನೆಯೇ ಹೊರಕ್ಕೆ ಬರುವನು. ಮನುಷ್ಯನು ಸಾಧನೆಗಳನ್ನು ಮಾಡಿ ಮುಕ್ತಿಯನ್ನು ಪಡೆಯುವವರೆಗೂ ಅವನಿಗೆ ಸೂಕ್ಷ್ಮಶರೀರ ದಿಂದ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಬಿಡುಗಡೆಯೇ ಇರುವುದಿಲ್ಲ. ಸಾಧನೆಗಳಿಂದ ಭಗವದ್ವಿಶೇಷ ಕಟಾಕ್ಷವನ್ನು ಪಡೆದು ಮುಕ್ತನಾದ ಜೀವನು ತನ್ನ ಆ ಕೊನೆಯ ಶರೀರವನ್ನು ತ್ಯಜಿಸಿದ ಮೇಲೆ ಸೂಕ್ಷ್ಮಶರೀರವೂ ಬಿಟ್ಟು ಹೋಗುವುದು. ಆಗ ಅವನು ಮುಕ್ತನಾಗಿ ತನ್ನ ಸ್ವಸ್ವರೂಪದೊಡನೆ ಪರಬ್ರಹ್ಮಾನುಭವವನ್ನು ಪಡೆದು ಶಾಶ್ವತಾನಂದವನ್ನು ಅನುಭವಿಸುವನು. ಈ ವಿಚಾರಗಳು ಮುಂದೆ ಅಲ್ಲಲ್ಲಿ ವಿಶದವಾಗಿ ವಿವರಿಸಲ್ಪಡುವುವು.

## ಕಾಲತತ್ತ್ವ ( Time )

ಕಾಲವೆಂಬುದನ್ನು ಪ್ರಪಂಚಸೃಷ್ಟಿಯಲ್ಲಿ ಒಂದು ಮುಖ್ಯವಾದ ತತ್ತ್ವವನ್ನಾಗಿ ಪರಿಗಣಿಸಿ ಶಾಸ್ತ್ರಗಳಲ್ಲಿ ವಿವರಿಸಿರುವುದು. ಪ್ರಕೃತಿಯ ಪರಿಣಾಮಗಳೆಲ್ಲವೂ ಕಾಲತತ್ತ್ವವನ್ನನುಸರಿಸುತ್ತಿರುವುವು. ಪ್ರಪಂಚದಲ್ಲಿ ನಡೆಯುವ ಕಾರ್ಯಗಳೆಲ್ಲವೂ ಕಾಲತತ್ತ್ವದೊಡನೆ ಕಲೆತೇ ಇರುವುವು. ಗ್ರಹಗಳು ಸೂರ್ಯನ ಸುತ್ತಲೂ ಕಾಲ ಪ್ರಮಾಣಗಳನ್ನನುಸರಿಸಿಯೇ ಸುತ್ತುತ್ತಿರುವುವು. ನಕ್ಷತ್ರಗಳಿಂದ ಬೆಳಕು ಒಂದು ನಿಯತವೇಗದಿಂದ ಸಂಚರಿಸುವುದು. ಆ ಬೆಳಕು ಭೂಮಿಯನ್ನು ತಲಪುವುದಕ್ಕೆ ನಿಯತವಾದ ಕಾಲವನ್ನು ಸರಿಸುವುದು. ಒಂದು ಬೀಜವನ್ನು ನೆಟ್ಟರೆ ಅದು ಮೊಳೆತು ಗಿಡವಾಗಿ ಫಲಿಸುವುದಕ್ಕೆ ನಿಯತವಾದ ಕಾಲಾವಕಾಶ ಬೇಕು. ಒಂದು ಕಾರ್ಯವನ್ನು ಆರಂಭಿಸಿದರೆ ಅದು ಮುಗಿಯುವುದಕ್ಕೆ ಕಾಲಾವಕಾಶ ಅವಶ್ಯಕ. ಗರ್ಭದಲ್ಲಿ ಮನುಷ್ಯ ಶಿಶು ಬೆಳೆದು ಹುಟ್ಟುವುದಕ್ಕೆ ಒಂಬತ್ತು ತಿಂಗಳು ಕಾಲಾವಕಾಶ ಬೇಕು. ಮನುಷ್ಯನು ಮಾಡುವ ಕರ್ಮಗಳು ಫಲಿಸುವುದಕ್ಕೂ ಕಾಲಾವಕಾಶ ಅವಶ್ಯಕ, ಹೀಗೆ ಕಾಲತತ್ತ್ವವು ಸೃಷ್ಟಿಯಲ್ಲಿ ಒಂದು ಮುಖ್ಯವಾದ ಅಂಗವಾಗಿರುವುದು.

ಕಾಲ ಪ್ರಮಾಣಗಳು :– ಈ ಕಾಲವು ನಿಮಿಷ, ಕಾಷ್ಠ, ಕಲೆ, ಮುಹೂರ್ತ, ದಿವಸ, ಮಾಸ, ವರ್ಷ ಇತ್ಯಾದಿ ವಿಭಾಗಗಳಿಂದ ಕೂಡಿರುವುದು. ಈಗಿನ ವ್ಯವಹಾರದಲ್ಲಿ ಸೆಕೆಂಡು (Second) ನಿಮಿಷ (Minute), ಗಂಟೆ, ದಿವಸ, ವರ್ಷ ಇತ್ಯಾದಿ ವಿಭಾಗಗಳಿರುವುವು ಹಿಂದೂಪಂಚಾಂಗಗಳಲ್ಲಿ ವಿಘಳಿಗೆ, ಘಳಿಗೆ, ಮುಹೂರ್ತ, ದಿವಸ ಇತ್ಯಾದಿ ವ್ಯವಹಾರಗಳಿರುವುವು. ಒಂದು ದಿವಸ ಎಂಬುವುದು ಸ್ವಲ್ಪ ಹೆಚ್ಚು ಕಡಿಮೆ ಎಲ್ಲದರಲ್ಲೂ ಒಂದೇ ಕಾಲಪ್ರಮಾಣವನ್ನು ಸೂಚಿಸುವುದು.

ಶಾಸ್ತ್ರರೀತ್ಯಾ 60 ವಿಘಳಿಗೆಗಳಿಗೆ ಒಂದು ಘಳಿಗೆ 60 ಘಳಿಗೆಗಳಿಗೆ ಒಂದುದಿನ 30 ದಿವಸಗಳಿಗೆ ಅಥವಾ ಎರಡು ಪಕ್ಷಗಳಿಗೆ ಒಂದು ತಿಂಗಳು. ಎರಡು ತಿಂಗಳಿಗೆ ಒಂದು ಋತು. 3 ಋತುಗಳಿಗೆ ಅಥವಾ 6 ತಿಂಗಳಿಗೆ ಒಂದು ಅಯನ. ಎರಡು ಅಯನಗಳಿಗೆ ಅಥವಾ ಹನ್ನೆರಡು ತಿಂಗಳಿಗೆ ಒಂದು ವರ್ಷ. ಇದು ಮಾನವರ ಒಂದುವರ್ಷ ಕಾಲ ಪ್ರಮಾಣ.

ನಮ್ಮ, ಎಂದರೆ ಮಾನವರ ಒಂದುವರ್ಷವೆಂಬುವುದು ದೇವಲೋಕದ (ಎಂದರೆ ಸ್ವರ್ಗದ) ಇಂದ್ರಾದಿದೇವತೆಗಳಿಗೆ ಒಂದು ದಿವಸ. 360 ದೇವತೆಗಳ ದಿವಸಕ್ಕೆ ಒಂದು ದೇವವರ್ಷ 12000 (ಹನ್ನೆರಡುಸಾವಿರ) ದೇವವರ್ಷಗಳಿಗೆ ಒಂದು ಚತುರ್ಯುಗ. ಅಂಥಾ 1000 (ಒಂದುಸಾವಿರ) ಚತುರ್ಯುಗಗಳಿಗೆ ಚತುರ್ಮುಖಬ್ರಹ್ಮನ ಒಂದು ಹಗಲು. ಬ್ರಹ್ಮನ ರಾತ್ರಿ ಹಗಲಿನ ಪ್ರಮಾಣದಷ್ಟೇ ಇರುವುದು. ಬ್ರಹ್ಮನ ಒಂದು ಹಗಲು ಒಂದು ರಾತ್ರಿ ಸೇರಿ ಅವನಿಗೆ ಒಂದುದಿನ· 360 ಬ್ರಹ್ಮನ ದಿವಸಗಳಿಗೆ ಬ್ರಹ್ಮನ ಒಂದುವರ್ಷ. ಮೇಲೆ ಹೇಳಿದ ಚತುರ್ಯುಗಗಳೇ ಕೃತಯುಗ, ತ್ರೇತಾಯುಗ, ದ್ವಾಪರಯುಗ ಮತ್ತು ಕಲಿಯುಗ.

ಮಾನವರಿಗೆ ಸಾಮಾನ್ಯವಾಗಿ ಅವರ ನೂರು ವರ್ಷಗಳು ಅವರ ಆಯುಸ್ಸೆಂದು ಹೇಳಿರುವಂತೆ, ಸ್ವರ್ಗದಲ್ಲಿರುವ ದೇವತೆಗಳಿಗೂ ಸ್ವರ್ಗವಾಸಿಗಳಿಗೂ ಅವರ ನೂರುವರ್ಷ ಆಯುಸ್ಸಿರುವುದು. ಚತುರ್ಮುಖ ಬ್ರಹ್ಮನ ಆಯುಸ್ಸು ಅವನ ನೂರು ವರ್ಷಗಳು. ಈ ಬ್ರಹ್ಮಾಂಡ ಸೃಷ್ಟಿಯು ಚತುರ್ಮುಖನ ನೂರುವರ್ಷಗಳ ವರೆಗೆ ಇದ್ದು ಅನಂತರ ಮಹಾಪ್ರಳಯ ಸಂಭವಿಸಿ ಬ್ರಹ್ಮಾಂಡವು ಪರಮಾತ್ಮನಲ್ಲಿ ಲೀನವಾಗುವುದು. ಕಾಲಾನ್ತರದಲ್ಲಿ ಪುನಃಸೃಷ್ಟಿಯಾಗುವುದು· ಆದರೆ ಶಾಸ್ತ್ರದಲ್ಲಿ 'ದೈನಂದಿನ ಪ್ರಳಯವೆಂದು' ಚತುರ್ಮುಖ ಬ್ರಹ್ಮನ ಪ್ರತಿಯೊಂದು ದಿವಸದ ಹಗಲಿನ ಕೊನೆಯಲ್ಲಿ ನಡೆದು ಆಗ ಕೆಳಗಿನ ಏಳು ಲೋಕಗಳೂ ಮತ್ತು ಭೂಲೋಕ ಭುವರ್ಲೋಕ, ಸುವರ್ಲೋಕ (ಎಂದರೆ ಸ್ವರ್ಗಲೋಕ) ಗಳೆಂಬ ಹತ್ತು ಲೋಕಗಳು ಲಯವಾಗಿ ಪುನಃ ಬ್ರಹ್ಮನ ಹಗಲು ಆರಂಭವಾದಾಗ ಸೃಷ್ಟಿಸಲ್ಪಡುವುವೆಂದು ಹೇಳಿರುವುದು. ಮೇಲಿನ ಉಳಿದ ನಾಲ್ಕು ಊರ್ಧ್ವ ಲೋಕಗಳು ಬ್ರಹ್ಮನ ನೂರುವರ್ಷಗಳವರೆಗೂ ಇರುವುವು.

ಹಿಂದೆಯೇ ಹೇಳಿರುವಂತೆ ಈ ಸೃಷ್ಟಿ ಪ್ರಳಯಗಳು ಒಂದಾದ ಮೇಲೊಂದರಂತೆ ಪರಮಾತ್ಮನ ಸಂಕಲ್ಪವನ್ನು ಸರಿಸಿ ನಡೆಯುತ್ತಲೇ ಇರುವುದು. ಶಾಸ್ತ್ರಗಳಲ್ಲಿ ಇನ್ನೂ ಅನೇಕ ವಿಷಯಗಳಿರುವುದಾದರೂ ಕಾಲತತ್ತ್ವವೊಂದಿರುವುದೆಂಬುದನ್ನು ಸಂಗ್ರಹವಾಗಿ ಇಷ್ಟು ಮಾತ್ರ ತಿಳಿಸಿ ಮುಗಿಸುವೆವು. (ಸಶೇಷ)



# ಮಧುರ ಕವಿ ಆಳ್ವಾರ್

ಮಧುರಕವಿ ಆಳ್ವಾರರು [illegible] ವೈಷ್ಣವಾಚಾರ್ಯರ [illegible] ಭಕ್ತಿಪೂರ್ವಕ [illegible] ಪ್ರಬಂಧ [illegible] ಈ [illegible] ಪ್ರಬಂಧವೇ "ಕಣ್ಣಿನುಣ್ ಶಿರುತ್ತಾಂಬು" ಎಂಬುದು. ಮಧುರ ಕವಿ ಆಳ್ವಾರರು [illegible] ಎಂಬ ದಿವ್ಯ ಕ್ಷೇತ್ರದಲ್ಲಿ ಈಶ್ವರ ಸಂವತ್ಸರ ಮೇಷ (ಚೈತ್ರ) ಮಾಸ ಶುಕ್ಲಪಕ್ಷ ಚಿತ್ತಾನಕ್ಷತ್ರ ಶುಕ್ರವಾರ ಕುಮುದಾಂಶರಾಗಿ [illegible] ಪೂರ್ವಶಿಖಾ ಬ್ರಾಹ್ಮಣ ಕುಲದಲ್ಲಿ ಅವತರಿಸಿದರು. ಇವರು ಶಠಕೋಪಮುನಿ ಎಂಬ ನಮ್ಮಾಳ್ವಾರ್ ಅವರ ಶ್ರೀಪಾದ ಸ್ಥಾನೀಯರಾಗಿ ಪ್ರಧಾನ ಶಿಷ್ಯರಾಗಿದ್ದ ಮಹನೀಯರು. ನಮ್ಮಾಳ್ವಾರರು ಅವತರಿಸಿದ ಮೇಲೆ ಹದಿನಾರು ವರ್ಷಗಳು ಆಳ್ವಾರ್ ತಿರುನಗರಿಯ ತಿಂತ್ರಿಣೀ ಮೂಲದಲ್ಲಿ ತಪಸ್ಸಿನಿಂದಿದ್ದವರನ್ನು ಎಚ್ಚರಿಸಿ ಬಹಿರ್ಮುಖರನ್ನಾಗಿ ಮಾಡಿ ಲೋಕೋಪಕಾರವಮಾಡಿರ ಮಹಾತ್ಮರಿವರು. ವಕುಳಭೂಷಣ ಭಾಸ್ಕರ ನಮ್ಮಾಳ್ವಾರರ ಅವತಾರಕ್ಕಿಂತ ಮೊದಲೇ ಅರುಣೋದಯದ ರೀತಿಯಲ್ಲಿ ಅವತರಿಸಿದ್ದವರು. ಪೂರ್ಣ ವಿದ್ಯಾವಂತರಾದ ಮೇಲೆ ಇವರ ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಹ್ಯವಂತಿಕಾ, ದ್ವಾರಕಾವತೀ ಚೈವ ಸಪ್ತೈತೇ ಮುಕ್ತಿದಾಯಕಾಃ— ಎಂಬಂತೆ ಅನೇಕ ದಿವ್ಯದೇಶ ಯಾತ್ರೆ ಮಾಡಿದರು. ಉತ್ತರಭಾರತದಲ್ಲಿ ಒಂದು ರಾತ್ರಿ, ದಕ್ಷಿಣದಿಂದ ಪ್ರಜ್ವಲಿಸುತ್ತಿದ್ದ ದಿವ್ಯಜ್ಯೋತಿಯನ್ನು ಕಂಡು ಅದರ ಉಗಮಸ್ಥಾನವನ್ನು ಕಾಣಬೇಕೆಂದು ರಾತ್ರಿಯಲ್ಲಿಯೇ ಕಾಲುನಡಿಗೆಯಿಂದಲೇ ದೂರವನ್ನು ಕ್ರಮಿಸುತ್ತಾ ಜ್ಯೋತಿಯ ದಿಕ್ಕಿನಲ್ಲೇ ನಡೆದು ಮಾಸಗಳು ಉರುಳಿದ ಮೇಲೆ ಮೋಕ್ಷಸ್ಥಾನವಾದ ಆಳ್ವಾರ್ ತಿರುನಗರಿಯಲ್ಲಿನ ಹುಣಸೇ ಮರದ ಮೂಲದಲ್ಲಿ ಧ್ಯಾನಾಸಕ್ತರಾಗಿ ಯೋಗಮುದ್ರೆಯೊಡನೆ ಮುಚ್ಚಿದ ಕಣ್ಣಿಂದ ತಪದಲ್ಲಿ ಮಗ್ನರಾಗಿದ್ದ ದಿವ್ಯ ಜ್ಯೋತಿ ನಮ್ಮಾಳ್ವಾರರನ್ನು ಕಂಡರು. ಇವರ ತಪೋಜ್ಯೋತಿಯ ದಿವ್ಯ ಪ್ರಭೆಯನ್ನೇ ಅನುಸರಿಸಿ ಬಂದು ಇಂದು ಕಂಡು ಕೃತಾರ್ಥರಾದರು. ಮಾತನಾಡಿಸಬೇಕೆಂಬ ಹಂಬಲ, ಅದಕ್ಕೆ ಪೀಠಿಕಾರೂಪದಲ್ಲಿ ಬಂಡೆಯನ್ನೊಡೆದು ಭಯಂಕರ ಶಬ್ದ ಮಾಡಿ ಆಳ್ವಾರರನ್ನು ಬಹಿರ್ಮುಖರನ್ನಾಗಿ ಮಾಡಿ ಕಣ್ಣು ತೆರೆಯುವಂತೆ ಮಾಡಿದರು. ತಮ್ಮ ವಿದ್ಯೆಯಿಂದಲೂ ಜ್ಞಾನದಿಂದಲೂ ಪರಿಹಾರ ಪಡೆಯದಿದ್ದ ಪ್ರಶ್ನೆಯೊಂದನ್ನು ಕೇಳಿದರು. ಕೂಡಲೇ ಸಮರ್ಪಕವಾದ ಉತ್ತರವು ದೊರೆತುದರಿಂದ ಜ್ಞಾನೋದಯವಾಯಿತು. ಅವರ ಆತಂಕವನ್ನು ಹರಿಸಿದ ಬಾಲಕ ನಮ್ಮಾಳ್ವಾರರನ್ನೇ ತಮ್ಮ ಗುರುವೆಂದು ಅವರಲ್ಲಿ ಶರಣಾಗತಿಮಾಡಿ ಶಿಷ್ಯರಾದರು. "ಗುರುಪಾದಾಂಬುಜ ಧ್ಯಾಯೇತ್ । ಗುರುರ್ನಾಮ ಸದಾ ಜಪೇತ್" ಎಂಬ ಧ್ಯೇಯವುಳ್ಳ ಮಧುರ ಕವಿ ಆಳ್ವಾರರ, ಭಕ್ತಿ ಪ್ರಪತ್ತಿ ವಿಷಯವಾಗಿ ಶಠಕೋಪರು ರಚಿಸಿದ ಪ್ರಬಂಧಗಳೆಲ್ಲವನ್ನೂ ಕಲಿತರು. ಇವರು ತಮ್ಮ ಗುರುವಿನಲ್ಲಿಯೇ ಪ್ರಪನ್ನರಾಗಿ ಆಳ್ವಾರರಿಗೆ ಸಮಾನವಾದ ಉನ್ನತಮಟ್ಟದ ಸ್ಥಾನವನ್ನು ಪಡೆದರು. ಇತರ ಆಳ್ವಾರರು ತಮ್ಮ ಯೋಗದೃಷ್ಟಿಯಿಂದ ಪರಮಾತ್ಮಾನುಭವವನ್ನು ಪಡೆದು ಅದನ್ನು ಪ್ರಬಂಧಗಳನ್ನಾಗಿ ಹಾಡಿದರೆ, ಮಧುರಕವಿ ಆಳ್ವಾರರು ತಮ್ಮ ಆಚಾರ್ಯರಾದ ಶಠಕೋಪರ ವೈಭವವನ್ನು ಕುರಿತು ಪ್ರಬಂಧವನ್ನಾಗಿ ಹಾಡಿದ್ದಾರೆ ಇದೇ—ಕಣ್ಣಿನುಣ್ ಶಿರುತ್ತಾಂಬು—ಎಂಬ ಭಕ್ತಿ ಪೂರಿತ ಗೀತ. ಇದನ್ನು ಪ್ರಬಂಧ ಸೇವಾಕಾಲದಲ್ಲಿ ತಿರುಪ್ಪಲ್ಲಾಂಡು ಪ್ರಬಂಧದ ನಂತರ ಪಾರಾಯಣಮಾಡುವ ಸಂಪ್ರದಾಯವಿದೆ. ಈ ದಿವ್ಯಪ್ರಬಂಧವನ್ನು ಶ್ರೀ ನಾಥಮುನಿ ಆಚಾರ್ಯರು ಅಂದು ಪರಾಂಕುಶದಾಸರಿಂದ ಬೋಧಿಸಲ್ಪಟ್ಟು, ಕುರುಕಾಪುರಿಯಲ್ಲಿ ಆದಿನಾಥಸ್ವಾಮಿಯ ಸನ್ನಿಧಿಯಲ್ಲಿ ಏಕಾಗ್ರಚಿತ್ತರಾಗಿ ಹನ್ನೆರಡು ಸಾವಿರ ಬಾರಿ ಭಕ್ತಿಯಿಂದ ಈ ಕಣ್ಣಿನುಣ್ ಶಿರುತ್ತಾಂಬು ಪ್ರಬಂಧವನ್ನು ಪಠಿಸಲು ನಮ್ಮಾಳ್ವಾರರು ಪ್ರತ್ಯಕ್ಷರಾದರು. ತಿರುವಾಯ್ಮೊಳಿ ಸಹಿತ ಎಲ್ಲಾ ನಾಲ್ಕುಸಾವಿರ ದಿವ್ಯಪ್ರಬಂಧಗಳು ಉದ್ಧಾರವಾದವು.

ನಾಥಮುನಿಗಳು ಕರುಣಿಸಿದ ಮುಕ್ತಪದ್ಯಗಳು:

ಅವಿದಿತ ವಿಷಯಾಂತರ ಶಠಾರೇ ಉಪನಿಷ
ದಾಮುಪಗಾನ ಮಾತ್ರಭೋಗಃ ।
ಅಪಿಚ ಗುಣಾವಶಾತ್ತದೇಕ ಶೇಷೀ, ಮಧುರ
ಕವಿರ್ಹೃದಯೇ ಮಮಾವಿರಸ್ತು ॥

ನಮ್ಮಾಳ್ವಾರರ ಯಾವ ದ್ರಾವಿಡೋಪನಿಷತ್ತುಗಳೆಂಬ ನಾಲ್ಕು ದಿವ್ಯ ಪ್ರಬಂಧಗಳ ಗಾನ ಸುಖವನ್ನನುಭವಿಸುತ್ತಾ ಇತರ ವಿಷಯಗಳನ್ನೊಲ್ಲದೆಯೂ, ಮತ್ತೆ ಆಳ್ವಾರರ ಕಲ್ಯಾಣ ಗುಣಗಳಿಗೆ ಮಾರುಹೋಗಿ ಅವರಿಗೇ ಶೇಷಭೂತರಾದ ಮಧುರಕವಿ ಆಳ್ವಾರರ ದಾಸನ ಹೃದಯಲ್ಲಿ ಆವಿರ್ಭವಿಸಿರುವರು.

ವೇರೊನ್ರುಂ ನಾನರಿಯೇನ್ ವೇದಂ
ತಮಿಳ್ ಶೆಯ್ದ,
ಮಾರನ್‌ಶಠಕೋಪನ್ ವಣ್‌ಕುರುಗೂರ್—
ಏರೆಂಗಳ್,
ವಾಳ್‌ವಾಮ್ ಎನ್ರೇತ್ತುಂ ಮಧುರಕವಿಯಾರ್
ಎಮ್ಮೈಯಾಳ್ವಾರ್ ಅವರೇ ಅರಣ್

ವೇದಾರ್ಥಕ್ಕೆ ಹೆಸರಾಂತ ಆಳ್ವಾರ್ ತಿರುನಗರಿ ನಿರ್ವಾಹಕರಾದ, ಸಂಸ್ಕೃತ ವೇದಗಳನ್ನು ದ್ರಾವಿಡ ವೇದವನ್ನಾಗಿಸಿದ ಶಠಕೋಪರು. ಮಾರನ್ ಎಂಬ ತಿರುನಾಮದಿಂದ ಮೆರೆವ ನಮ್ಮಾಳ್ವಾರರನ್ನುಳಿದು ಬೇರೊಂದನ್ನು ನಾನರಿಯೆ. ನಮಗೆ ಸುಖ ಜೀವನವೂ ಅವರೇ— ಎಂದು ಸ್ತೋತ್ರ ಮಾಡಿದ ಮಧುರಕವಿ ಆಳ್ವಾರ್ ಅವರೇ ನಮಗೆ ರಕ್ಷಕರು

ಕಣ್ಣಿನುಣ್ ಶಿರುತ್ತಾಂಬು ಪ್ರಬಂಧ ಪಾಠ ಮತ್ತು ಕನ್ನಡಾನುವಾದ ಈ ರೀತಿ ಇದೆ.

ಕಣ್ಣಿನುಣ್ ಶಿರುತ್ತಾಂಬಿನಾಲ್, ಕಟ್ಟುಣ್ಣ
ಪ್ಪಣ್ಣಿಯ ಪೆರುಮಾಯ, ನೆನ ಪ್ಪನಿಲ್।
ನಣ್ಣಿತ್ತೆನ್‌ಕುರುಗೂರ್ ನಂಬಿಯೆನ್ರಕ್ಕಾಲ್,
ಅಣ್ಣಿಕ್ಕುಂ ಅಮುದೂರುಂ ಎನ್ನಾವುಕ್ಕೇ॥

ಗಂಟುಗಳಿಂದ ಕೂಡಿದ ಸಣ್ಣದಾದ ಪುಟ್ಟ ಹಗ್ಗದಿಂದ ಬಂಧಿಸಲ್ಪಡುವಂತೆ ಮಾಡಿಕೊಂಡು, ನಿರತಿಶಯಾಶ್ಚರ್ಯಯುಕ್ತನಾದ ಆ ಸ್ವಾಮಿಯಾದ ಸರ್ವೇಶ್ವರನಿಗಿಂತ ಹೆಚ್ಚಿನ ಪ್ರೀತಿಯಿಂದ ಆಶ್ರಯಿಸಿ, ದಕ್ಷಿಣ ದಿಕ್ಕಿನಲ್ಲಿರುವ ಆಳ್ವಾರ್ ತಿರುನಗರಿಗೆ ನಿರ್ವಾಹಕರಾದ ನಮ್ಮಾಳ್ವಾರರ ತಿರುನಾಮವನ್ನು ಪಠಿಸುವ ನನ್ನ ನಾಲಗೆಯಲ್ಲಿ ಅಮೃತ ಮೂಡುತ್ತಿರುವುದು.

ನಾವಿನಾಲ್ ನವಿಶ್ರಿನ್ಬ ಮೆಯ್ದಿನೇನ್,
ಮೇವಿನೇನವನ್ಪೊನ್ನಡಿ ಮೆಯ್‌ಮ್ಮೈಯೇ ।
ತೇವುಮತ್ತರಿಯೇನ್ ಕುರುಗೂರ್ ನಂಬಿ,
ಪಾವಿನಿನ್ನಿಶೈಪ್ಪಾಡಿತ್ತಿರಿವನೇ ॥

ಸ್ತೋತ್ರಮಾಡಲು ಯೋಗ್ಯವಾದ ನನ್ನ ನಾಲಿಗೆಯಿಂದ ಶಠಾರಿ ಮುನಿಯನ್ನು ಸ್ತೋತ್ರ ಮಾಡಿ, ನಿರತಿಶಯಾನಂದ ರೂಪ ಪುರುಷಾರ್ಥವನ್ನು ಪಡೆದೆನು. ಆಳ್ವಾರರ ರಮ್ಯವಾದ ಶ್ರೀ ಪಾದಾರವಿಂದಗಳನ್ನು ಆಶ್ರಯಿಸಿದೆನು ಸತ್ಯವಾಗಿಯೂ ಆಳ್ವಾರರನ್ನುಳಿದು ಮತ್ತೊಬ್ಬ ದೈವವನ್ನು ನಾ ಕಾಣೆನು. ಕಲ್ಯಾಣಗುಣ ಪರಿಪೂರ್ಣರಾದ ತಿರುನಗರಿಯ ನಮ್ಮಾಳ್ವಾರರು ಕರುಣಿಸಿರುವ ಭಕ್ತಿಪೂರ್ವಕ ರಮ್ಯವಾದ ದಿವ್ಯ ಪ್ರಬಂಧಗಳನ್ನು ಹಾಡುತ್ತಾ ಸಂಚರಿಸುವೆನು.

ತಿರಿತಂದಾಗಿಲುಂ ತೇವಪಿರಾನುಡೈ, ಕ್ಕರಿಯ
ಕೋಲತ್ತಿರುವುರುಕ್ಕಾಣ್ಬಾನ್ ನಾನ್ ।
ಪೆರಿಯವಣ್ ಕುರುಗೂರ್ ನಗರ್‌ನಂಬಿಕ್ಕಾ,
ಳುರಿಯನಾ, ಯಡಿಯೇನ್ ಪೆಟ್ರನಲ್ಲೈಯೇ ॥

ಆಳ್ವಾರರ ಸನ್ನಿಧಿಯಲ್ಲದೆ ಪ್ರತಿತಾದರೂ ನಾನು, ನಿತ್ಯಸೂರಿ ನಿರ್ವಾಹಕನಾದ, ನೀಲ ಮೇಘಶ್ಯಾಮನಾದ, ಲಕ್ಷ್ಮೀಸಹಿತ ರಾರಾಜಿಸುವ ದಿವ್ಯಮಂಗಳಮೂರ್ತಿಯನ್ನು ಸ್ಮರಿಸದಿರುವಂತಾದರೂ, ಅತಿ ಹೆಚ್ಚಿನ ಉದಾರಿಗಳಾದ ಆಳ್ವಾರ್ ತಿರುನಗರಿಯಲ್ಲಿ ಅವತರಿಸಿದ ನಮ್ಮಾಳ್ವಾರರಿಗೆ ಸಂದ ಶೇಷಭೂತನಾದ ದಾಸನು ಅವರ ಕೃಪೆಯಿಂದಲೇ ಭಗವಲ್ಲಾಭವನ್ನು ಪಡೆದಿರುವೆ,ಆದರಲ್ಲಿ ಆಶ್ಚರ್ಯವೇನಿದೆ.

ನನ್ಮೈಯಾಲ್ ಮಿಕ್ಕನಾನ್ಮರೈಯಾಳರ್‌ಗಳ್
ಪುನ್ಮೈಯಾಗಕ್ಕರುದುವರಾದಲಿಲ್ ।
ಅನ್ನೈಯಾಯತ್ತನಾಯೆನ್ನೈಯಾಂಡಿಡುಂ
ತನ್ಮೈಯಾನ್, ಶಡಕೋಪನೆನ್ನಂಬಿಯೇ॥

ಅಪಕಾರಿಗಳಿಗೂ ಸಹ ಉಪಕಾರಮಾಡುವ ಗುಣಗಳುಳ್ಳ ವೇದ ಚತುಷ್ಟಯಮರಿತ ವೇದವ್ಯಾಸರಂತೆ ಸಾಮರ್ಥ್ಯ ಉಳ್ಳ ಹಿರಿಯರು ಈ ದಾಸನನ್ನು ನಿರ್ಲಕ್ಷಿಸಿದರೂ, ತಂದೆಯಾಗಿ, ತಾಯಿಯಾಗಿ ಸಲಹುವ ಸ್ವಭಾವ ಗುಣಗಳುಳ್ಳ ಆಳ್ವಾರರು ದಾಸನ ದುಷ್ಟ ಸ್ವಭಾವಗಳನ್ನು ನಾಶಪಡಿಸಿ, ಕೊರತೆಗಳನ್ನು ಪೂರೈಸಿದ ಮಹಾತ್ಮರಾಗಿರುವರು.

ನಮ್ಮಿನೇನ್‌ಪಿರರ್ ನನ್ಪೊರುಳ್ ತನ್ನೈಯುಂ,
ನಮ್ಮಿನೇನ್ ಮಡವಾರೈಯುಮುನ್ನೆಲ್ಲಾಂ ।
ಶೆಂಬೊನ್ಮಾಡ ತಿರುಕ್ಕುರುಗೂರ್ ನಂಬಿ
ಕ್ಕನ್ಬನಾ, ಯಡಿಯೇನ್ ಶದಿರ್‌ತ್ತಿನ್ರೇ ॥

ಪೂರ್ವದಲ್ಲಿ ಈಶ್ವರನ ಯಾವ ಆತ್ಮವಸ್ತುವು ನನ್ನದೆಂದೇ ಭಾವಿಸಿ ಅಪಹರಿಸಿಯೂ. ಪತಿವ್ರತಾ ಸ್ತ್ರೀಯರನ್ನು ಇಚ್ಛಿಸುವ ನಂಬಿಕೆಯುಳ್ಳದ್ದೆನು. ಬಂಗಾರ ಶಿಖರಗಳಿಂದಾವೃತವಾದ ತಿರುನಗರಿಯಲ್ಲಿ ಅವತರಿಸಿದ ಆಳ್ವಾರರಿಗೆ ಶಿಷ್ಯನಾಗಿ ಭಕ್ತನಾದ ದಿನವೇ ಚತುರನಾಗಿ ಪಡೆದ ಭಾಗ್ಯದಲ್ಲಿ ಬದುಕಿರುವೆ.

ಇನ್ರುತೊಟ್ಟುಂ ಎಳುಮೈಯುಮೆಂಬಿರಾನ್
ನಿನ್ರುತನ್ಪುಗಳೇತ್ತ ವರುಳಿನಾನ್ ।
ಕುನ್ರಮಾಡತ್ತಿರುಕ್ಕುರುಗೂರ್ ನಂಬಿ,
ಎನ್ರುಮೆನ್ನೈಯಿಗಳ್ವಿಲನ್ ಕಾಣ್ಮಿನೇ ॥

ಇಂದಿನಿಂದ ಮುಂದೆಲ್ಲಾ ಕಾಲದಲ್ಲೂ ದಾಸನಿಗೆ ಉಪಕಾರಪರರಾದ ಆಳ್ವಾರರು ತಮ್ಮ ಕಲ್ಯಾಣಗುಣಗಳನ್ನು ಸ್ಥಿರವಾಗಿ ನಾನು ನುತಿಸಲು ಕೃಪೆಗೈದರು. ಪರ್ವತ ಸಮಾನ ಉಪ್ಪರಿಗೆ ಮನೆಗಳಿಂದ ಕೂಡಿದ ತಿರುನಗರಿಯಲ್ಲಿ ನೆಲೆಸಿರುವ ಆಳ್ವಾರರು ಎಂದೆಂದೂ ನನ್ನನ್ನು ವಿಷಯ ಭೋಗಗಳಿಗೆ ಬಿಡುವುದಿಲ್ಲ

ಕಂಡುಕೊಂಡೆನ್ನೈ ಕ್ಕಾರಿಮಾರಪ್ಪಿರಾನ್,
ಪಂಡೆವಲ್ವಿನೈ ಪಾತ್ತಿಯರುಳಿನಾನ್ ।
ಎಂಡಿಶೈಯುಮರಿಯವಿಯಂಬುಗೇನ್,
ಒಂಡಮಿಳ್‌ಶಡಗೋಪನರುಳೈಯೇ ॥

ಶಾಸ್ತ್ರಕಾರರು ಅಂಗೀಕರಿಸಿದ ನನ್ನ ದೋಷಗಳನ್ನು ಲೆಕ್ಕಿಸದೆ ಕಟಾಕ್ಷಿಸಿ ಉಪಕಾರ ಮಾಡಿರುವ ಆಳ್ವಾರರು ಅನಾದಿಯಾದ ನನ್ನ ಪಾಪರಾಶಿಯನ್ನು ನಾಶಪಡಿಸಿ ಕೃಪೆಮಾಡಿದರು ಶ್ಲಾಘ್ಯವಾದ ದ್ರಾವಿಡ ಪ್ರಬಂಧಗಳನ್ನು ರಚಿಸಿದ ಈ ಮುನಿವರ್ಯರ ಕೃಪೆಯು ಎಂಟು ದಿಕ್ಕುಗಳಲ್ಲೂ ಪಸರಿಸಿ ಎಲ್ಲರನ್ನೂ ಉಜ್ಜೀವಿಸುವಂತೆ ನಾನು ಸ್ತುತಿಸುವೆನು.

ಅರುಳ್‌ಕೊಂಡಾಡು ಮಡಿಯವರಿನ್ಪುರ,
ಅರುಳಿನಾನವ್ವರುಮರೈಯಿನ್ ಪೊರುಳ್ ।
ಅರುಳ್‌ಕೊಂಡಾಯಿರವಿನ್ ತಮಿಳ್
ಪಾಡಿನಾನ್, ಅರುಳ್‌ಕಂಡೀರ್
ಪ್ಪುಲಕಿನಿಲ್ ಮಿಕ್ಕದೇ ॥

ಭಕ್ತಜನರೆಲ್ಲರೂ ಆನಂದತುಂದಿಲರಾಗಿ ಇವರ ಕೃಪೆಯನ್ನು ಕೊಂಡಾಡುವಂತೆ ಅದ್ಭುತವಾದ ವೇದ ರಹಸ್ಯಾರ್ಥಗಳನ್ನು ಕೃಪೆಗೈದಿರುವರು. ಭಗವತ್ಕೃಪೆ ಪ್ರೊತ್ತ ಸಹಸ್ರಗಾಥಾರೂಪವಾದ ಮಧುರ ತಮವಾದ ತಿರುವಾಯ್ಮೊಳಿ ಪ್ರಬಂಧವನ್ನು ಹಾಡಿರುವರು. ಈ ಮಹಾತ್ಮರ ಕೃಪೆಯು ಲೋಕದಲ್ಲಿ ಅತಿಶಯವಾದುದೆಂಬುದನ್ನು ನೀವೆಲ್ಲಾ ಅರಿತಿರುವಿರಷ್ಟೇ !

ಮಿಕ್ಕ ವೇದಿಯರ್ ವೇದತ್ತಿನುಟ್ಪೊರುಳ್
ನಿರ್ಕಪ್ಪಾಡಿ ಯೆನ್ನೆಂಜುಳ್ ನಿರುತ್ತಿನಾನ್ ।
ತಕ್ಕಶೀರ್ ಶ್ಶಡಕೋಪನೆನ್ನಂಬಿಕ್ಕಾಟ್,
ಪುಕ್ಕ ಕಾದಲಡಿ ಮೈಯ್ಯಪ್ಪಯನನ್ರೇ ॥

ವೈದಿಕೋತ್ತಮರೆಲ್ಲರ ವೇದಾರ್ಥ ರಹಸ್ಯಾರ್ಥಗಳನ್ನೆಲ್ಲಾ ಪ್ರಬಂಧರೂಪದಲ್ಲಿ ಸ್ಥಿರವಾಗಿ ನನ್ನ ಹೃದಯದಲ್ಲಿ ನೆಲೆಗೊಳ್ಳುವಂತೆ ಶಠಕೋಪರು ಕರುಣಿಸಿರುವರು. ಜ್ಞಾನಾದಿ ಪರಿಪೂರ್ಣರಾದ ನಮ್ಮಾಳ್ವಾರರು ಶಠವನ್ನು ಕೋಪದಿಂದಟ್ಟಿದರು. ಅವರಿಗೆ ದಾಸಭೂತನಾಗಿ ಅವರನ್ನು ಆಶ್ರಯಿಸಿದ ನನ್ನ ಭಾಗ್ಯ ಅತಿಹೆಚ್ಚಿನದಲ್ತೆ !

ಪಯನನ್ರಾಗಿಲುಂ ಪಾಂಗಿಲರಾಗಿಲುಂ,
ಶೆಯಲ್ ನನ್ರಾಗತ್ತಿರುತ್ತಿಪ್ಪಣಿಕೊಳ್ವಾನ್ ।
ಕುಯಿಲ್‌ನಿನ್ರಾಲ್ ಪೊಳಿಲ್‌ಶೂಳ್
ಕುರುಗೂರ್ ನಂಬಿ, ಮುಯಲ್‌ಗಿನ್ರೇ
ನುನ್ರನ್ ಮೊಯ್ಕಳರ್ಕನ್ಬೈಯೇ ॥

ಚೇತನರು ನಿಷ್ಪ್ರಯೋಜಕರಾಗಿಯೂ, ಗುಣಹೀನರಾಗಿಯೂ ಇದ್ದಾಗ್ಯೂ ಅವರ ಕೃತಕೃತ್ಯಗಳನ್ನು ಪರಮ ಕೃಪೆಯಿಂದ ಪರಿಷ್ಕರಿಸಿ ಉತ್ತಮ ಜ್ಞಾನಾನುಷ್ಠಾನ ಸಂಪತ್ತು ಪ್ರಾಪ್ತವಾಗುವಂತೆಯೂ, ಭಗವದ್ಭಾಗವತಾಚಾರ್ಯ ಕೈಂಕರ್ಯಪರರನ್ನಾಗಿಯೂ ಅನುಗ್ರಹಿಸಿ ಅಂಗೀಕರಿಸುವರು ಆಳ್ವಾರರು. ಕೋಗಿಲೆಗಳು ಗಾನಮಾಡುತ್ತಿರುವ ಕೋಟೆಗಳಿಂದಾವೃತವಾದ ತಿರುನಗರಿಯ ನಿರ್ವಾಹಕರಾದ ಆಳ್ವಾರರ ಶ್ರೀಪಾದಗಳಲ್ಲಿ ಪ್ರೇಮಯಾಚನೆಯನ್ನು ಅನವರತಮಾಡುತ್ತಿರುವೆನು.

ಅನ್ಬನ್ರನ್ನೈಯುಡೈಯವರ್ ಕಟ್ಕೆಲ್ಲಾ
ಮನ್ಬನ್, ತೆನ್ಕುರುಗೂರ್ ನಗರ್‌ನಂಬಿಕ್ಕು ।
ಅನ್ಬನಾಯ್ ಮದುರಕವಿಶೊನ್ನಶೊಲ್,
ನಂಬುವಾರ್ ಪದಿ ವೈಕುಂದಂ ಕಾಣ್ಮಿನೇ ॥

ಆಶ್ರಿತವತ್ಸಲನಾದ ಪರಮಾತ್ಮನನ್ನು ಆಶ್ರಯಿಸಿದವರೆಲ್ಲರಿಗೂ ವಾತ್ಸಲ್ಯವುಳ್ಳ ಕುರುಕಾಪುರೀಶರಾದ ಶಠಾರಿಮುನಿಗಳಿಗೆ ದಾಸಭೂತರಾಗಿರುವ ಮಧುರ ಕವಿ ಆಳ್ವಾರರು ಕೃಪೆಯಿಂದ ಕರುಣಿಸಿರುವ ಈ ಹತ್ತು ಪಾಶುರಗಳನ್ನು ನಂಬಿದ ಭಕ್ತರು ನೆಲೆಸಿರುವ ತಾಣವೇ ಪರಮಪದವೆನಿಸುವುದು.

ಕೃಷ್ಣಾರ್ಪಣಂ.

—ಹಾರೋಹಳ್ಳಿ ತಿರುವೆಂಗಡಶರ್ಮ

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಆಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

ಯುವವಾಣಿ

# ರಾಮಕೃಷ್ಣರ ಹಾಸ್ಯಭಾವ

ಶ್ರೀ ರಾಮಕೃಷ್ಣ ಪರಮಹಂಸರು ನಮಗೆಲ್ಲ ತಿಳಿದಂತೆ ನಿರಕ್ಷರಕುಕ್ಷಿಗಳು. ಇಂತಹವರು ಇಂಗ್ಲಿಷ್ ಪದ ಬಳಸಿದರೆಂದರೆ ಓದುಗರಿಗೆ ಆಶ್ಚರ್ಯ ಹಾಗೂ ಹಾಸ್ಯ ವಿಡಂಬನೆ ಎನಿಸುವುದು. ಇದೋ ನೋಡಿ!

ಒಮ್ಮೆ ಶ್ರೀ ರಾಮಕೃಷ್ಣರ ಬಳಿಗೆ ಪಂಡಿತ ವೈದ್ಯನಾಥ ಬಂದರು. ಆತ ಜ್ಞಾನವೆಂದರೆ ಚರ್ಚಿಸುವುದೆಂದು ತಿಳಿದಿದ್ದರು. ಆದರೆ ರಾಮಕೃಷ್ಣರು ತಿಳಿಸುತ್ತಾರೆ – ನಿಜವಾದ ಜ್ಞಾನಿಯಾದವನು ಭಗವಂತನ ಕೈಯಲ್ಲಿ ಒಂದು ನಿಮಿತ್ತನಾಗುವನು. ಅವನೊಂದು ಕೊಳಲಾಗುವನು ಆ ಕೊಳಲು ಕೆಲಸಕ್ಕೆ ಬಾರದ ಮೂರು ಕಾಸಿಗೆ ಕೊಂಡ ಬಿದಿರಿನ ತುಂಡು ಇರಬಹುದು. ಆದರೆ ಅದನ್ನು ಬಾರಿಸುವವನು ದೇವರು. ಶ್ರೀ ರಾಮಕೃಷ್ಣರ ಅದ್ಭುತವಾದ ಬುದ್ಧಿ ಪರಸ್ಪರ ವಿರೋಧದಂತಿರುವ ವಿವರಣೆಗಳ ಹಿಂದೆ ಒಂದು ಸಾಮರಸ್ಯವನ್ನು ತರುವುದು.

ಇದನ್ನು ಕೇಳಿದ ಪಂಡಿತ ವೈದ್ಯನಾಥ "ನಿಜವಾದ ಜ್ಞಾನ ಬಂದರೆ ಚರ್ಚೆ ಮಾಡುವ ಪ್ರವೃತ್ತಿ ಬಿಟ್ಟುಹೋಗುತ್ತದೆ" ಎಂದು ಹೇಳುತ್ತಾರೆ.

ಶ್ರೀ ರಾಮಕೃಷ್ಣರು ವೈದ್ಯನಾಥ ನಾನು ಹೇಳಿದ ವಿಷಯ ಚೆನ್ನಾಗಿ ಗ್ರಹಿಸಿದ ಎಂದು ಗೊತ್ತಾದಾಗ ಸಂತೋಷದಿಂದ Thank you (ನಿನಗೆ ವಂದನೆಗಳು) ಎನ್ನುತ್ತಾರೆ.

ಇಲ್ಲಿ ನಗೆಗಡಲು ಮತ್ತು ಜೀವನ ಧರ್ಮಶಾಸ್ತ್ರವನ್ನು ತಿಳಿಸುತ್ತಾರೆ.

ಮತ್ತೊಮ್ಮೆ ದೇವರನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಅಂತೆಯೇ ನೀರು, ಜಲ, water ಎಂದು ದೇವರನ್ನು God ಎಂದು ಕರೆಯುತ್ತಾರೆ ಎಂದು ತಮ್ಮ ಶಿಷ್ಯರನ್ನು ಹಾಸ್ಯದ ಹೊನಲಿನಲ್ಲಿ ಮುಳುಗಿಸುತ್ತಾರೆ.

ಮತ್ತೊಂದು ಸಂದರ್ಭದಲ್ಲಿ ನರೇಂದ್ರನ ಧೈರ್ಯ, ಸಾಹಸ, ಶ್ರದ್ಧೆಯನ್ನು ಕಂಡು ಶ್ರೀ ರಾಮಕೃಷ್ಣರು ತಿಳಿಸುತ್ತಾರೆ- ನೋಡು ನರೇಂದ್ರ, ಯಾರಿಗೂ Care ಮಾಡುವುದೇ ಇಲ್ಲ. ಇಲ್ಲಿ ಇತರ ಶಿಷ್ಯರನ್ನು ಸಂತೋಷಪಡಿಸುತ್ತಾರೆ.

ಒಂದು ಸಲ ಬಾವೃಲ ನೆಂಬ ಭಕ್ತನು ರಾಮಕೃಷ್ಣರ ಸಮೀಪಕ್ಕೆ ಬಂದ. "ಏನು ನಿನ್ನ ಪಾಕದ ಕೆಲಸ ಮುಗಿಯಿತೆ, ಅದನ್ನು ಒಲೆಯ ಮೇಲಿಂದ ಕೆಳಗೆ ಇಟ್ಟಿರುವೆಯಾ" ಎಂದು ಕೇಳಿದರು. "ರಸವನ್ನು ಕಾಯಿಸಿದಷ್ಟು Refine (ಪರಿಶುದ್ಧ) ಆಗುವುದು- ಕಬ್ಬಿನ ರಸವನ್ನು ಹೆಚ್ಚು ಹೆಚ್ಚು ಒಲೆಯ ಮೇಲೆ ಕಾಯಿಸಿ ಪರಿಶುದ್ಧ ಮಾಡಿದಷ್ಟು ಅದು ಬೆಲ್ಲ ಸಕ್ಕರೆ, ಕಲ್ಲುಸಕ್ಕರೆ ಆಗುವುದು. ಅದರಂತೆಯೇ ಸಾಧನೆ ಮಾಡುತ್ತಾ ಹೋದಂತೆ ಮನುಷ್ಯನಲ್ಲಿರುವ ಕಲ್ಮಶಗಳು ಕಡಿಮೆಯಾಗುತ್ತಾ ಬರುವುವು" ರಾಮಕೃಷ್ಣರು ಸಾಧನೆಯಿಂದ ನಿನ್ನ ಮನಸ್ಸು ಶುದ್ಧವಾಯಿತೆ ಎಂಬ ಅರ್ಥದಲ್ಲಿ Refine ಎಂಬ ಪದವನ್ನು ಉಪಯೋಗಿಸುವರು.

ಒಮ್ಮೆ ರಾಮಕೃಷ್ಣರು ಹೇಳುತ್ತಾರೆ ದೇವರು ಎಂತಹ Beautiful (ಸುಂದರವಾದ) ಹೂವನ್ನು ಸೃಷ್ಟಿಸಿದ್ದಾನೆ. ಇಹದಲ್ಲಿ ಆಸಕ್ತನ ಭಕ್ತಿ ಕಾದ ಕಾವಲಿ ಮೇಲೆ ಒಂದೆರಡು ಹನಿ ನೀರು ಬಿದ್ದಹಾಗೆ, ತಕ್ಷಣವೆ ಆವಿಯಾಗಿ ಹೋಗುವುದು–ಎನ್ನುವರು.

ಮತ್ತೊಂದು ಸಂದರ್ಭದಲ್ಲಿ ಶ್ರೀ ರಾಮಕೃಷ್ಣರು ಇಂಗ್ಲಿಷ್ ಪದ ಬಳಸಿ ನಗೆಗಡಲಿನಲ್ಲಿ ತಮ್ಮ ಶಿಷ್ಯರನ್ನು ಮುಳುಗಿಸುತ್ತಾರೆ. Science ಎಂದರೆ ಭೌತಿಕವಿಜ್ಞಾನ ಇಂಗ್ಲಿಷ್ ಭಾಷೆಯೊಡನೆಯೇ ನಮ್ಮ ದೇಶಕ್ಕೆ ಪ್ರವೇಶಿಸಿರುವುದು ಎಂದು ಕೆಲವರ ಭಾವನೆ. ಈ ಪ್ರಪಂಚ ಮತ್ತು ಅದಕ್ಕೆ ಸಂಬಂಧಪಟ್ಟಿದ್ದನ್ನೆಲ್ಲ ತಿಳಿದುಕೊಳ್ಳಬೇಕು ಅನಂತರ ದೇವರನ್ನು ತಿಳಿದುಕೊಳ್ಳಬೇಕು. ಎಂಬುದು ರಾಮಕೃಷ್ಣರು ಬಂಕಿಮ ಚಂದ್ರನೊಡನೆ ಮಾತನಾಡುತ್ತಿದ್ದಾಗ "ಕೆಲವರು ಭಾವಿಸುತ್ತಾರೆ ಶಾಸ್ತ್ರ ಓದದೇ ಇದ್ದರೆ ಭಗವಂತನನ್ನು ಪಡೆಯುವುದಕ್ಕೆ ಆಗುವುದಿಲ್ಲ ಎಂದು ಮೊದಲು ಜಗತ್ತನ್ನೇ ತಿಳಿದುಕೊಳ್ಳಬೇಕು Science ಅಥವಾ ದೇವರು"

ಬಂಕಿಮ ಹೇಳುತ್ತಾನೆ – ಮೊದಲು ಪ್ರಪಂಚ ತಿಳಿದುಕೊಳ್ಳಬೇಕು. ಅನಂತರ ದೇವರು-ಅಂತ. ಶ್ರೀರಾಮಕೃಷ್ಣರು ಇದನ್ನು ಕೇಳಿ "ನಿಮ್ಮದೆಲ್ಲ ಒಂದೇ ಕೂಗು. ಹೇಗೋ ಯದುಮಲ್ಲಿಕನ ಪರಿಚಯ ಮಾಡಿಕೊಂಡರೆ ಅವನಿಗೆ ಸಂಬಂಧಪಟ್ಟ ಮನೆ ತೋಟ ಇವುಗಳೆಲ್ಲ ಗೊತ್ತಾಗುವುದಿಲ್ಲವೆ? ಎಂದು ಕೇಳುತ್ತಾರೆ. ಮೊದಲು ದೇವರು ಅವನನ್ನು ತಿಳಿದುಕೊಂಡರೆ ಎಲ್ಲಾ ವಿಜ್ಞಾನಗಳ ಹಿಂದೆ ಇರುವ ಶಕ್ತಿಯನ್ನು ಅರಿತುಕೊಳ್ಳಬಹುದು.

ಹೀಗೆ ಶ್ರೀ ರಾಮಕೃಷ್ಣರು ತಮ್ಮ ಶಿಷ್ಯರಿಗೆ ಸರಸವಾದ ಮಾತಿನಲ್ಲಿ ತತ್ತ್ವವನ್ನು ತಿಳಿಸುತ್ತಿದ್ದರು ಎಂಬುದು ಮುಖ್ಯವಾಗುತ್ತದೆ.

ಶ್ರೀ ಡಿ. ಕೆ. ನಾಗರಾಜ್

# ಹನುಮತ್ತತ್ತ್ವ

ಡಾ|| ಕೆ. ಸರ್ವೋತ್ತಮರಾವ್

ಚರಾಚರ ಪ್ರಪಂಚವನ್ನು ಕಾಯುವ ಮುಕ್ಕೋಟಿ ದೇವತೆಗಳಲ್ಲಿ ಕಳಂಕವಿಲ್ಲದ ದೇವತೆಗಳು ವಿನಾಯಕ, ಹನುಮಂತರಾಯರು ಇಬ್ಬರೇ. ಹನುಮಂತನು ಎಲ್ಲರಿಗೂ ಆರಾಧ್ಯಮೂರ್ತಿ. ವಿಶಿಷ್ಟಾದ್ವೈತರು ಆಳ್ವಾರುಗಳನ್ನು 'ಪೆರಿಯ ತಿರುವಡಿ' ಎಂದು, ಹನುಮಂತನ 'ಸಿರಿಯ ತಿರುವಡಿ'ಗಳೆಂದು ಆರಾಧಿಸುವರು. ದ್ವೈತರು ಹನುಮಂತನೇ ಮಧ್ವಾಚಾರ್ಯರೆಂದು ನಂಬುತ್ತಾರೆ. ಹನುಮತ್ತತ್ತ್ವವನ್ನು ಅನೇಕ ರೀತಿಯಲ್ಲಿ ಅರಿಯಲಾಗಿದೆ.

ರೂಪತತ್ತ್ವ: ಒಂದೊಂದು ದೇವತೆಗೆ ಒಂದು ರೂಪ ಉಂಟು. ಆ ರೂಪವು ಜಲಚರವಾಗಲಿ, ಭೂಚರವಾಗಲಿ ಉಭಯಚರ ಜಂತುರೂಪವಾಗಿ ಇರಬಹುದು. ಹನುಮಂತನು ವಾನರಜಾತಿಗೆ ಸೇರಿದ ಬಲವಂತನು, ಪಾದಗಳಲ್ಲಿ ಧ್ವಜ, ಅಂಕುಶಾದಿ ಚಿಹ್ನೆಗಳುಂಟು, ಹನುಮದ್ವಿಗ್ರಹಕ್ಕೆ ಸಿಂಧೂರ ಹಚ್ಚುವುದು ಒಂದು ಆಚಾರ, ಸಿಂಧೂರ ಕರ್ಮತತ್ಪರತೆಗೆ ಚಿಹ್ನೆಯಾಗುತ್ತದೆ. ಮತ್ತು ಯುದ್ಧಕ್ಕೆ ಹೊರಡುವವರು ಅಲಂಕರಿಸಿಕೊಂಡು ಹೋಗುವದು ಆಚಾರವೇ. ಗಾಯಗಳಿಗೆ ತುಪ್ಪದಲ್ಲಿ ಕಲಿಸಿದ ಕುಂಕುಮ ಲೇಪನವನ್ನು ಹಚ್ಚುವದು ವೈದ್ಯ ಚಿಕಿತ್ಸೆಯಲ್ಲಿ ಭಾಗವೇ.

ಕಾಮರೂಪವನ್ನೆತ್ತುವುದು ರಾಕ್ಷಸರಿಗೆ ಮಾತ್ರವಲ್ಲ, ದೇವತೆಗಳಿಗೆ ಕೂಡ ಸಾಧ್ಯವೇ. ಹನುಮಂತನು ಸೀತೆಗೆ, ಭೀಮನಿಗೆ ವಿರಾಟ್‌ರೂಪವನ್ನು ತೋರಿಸಿದ್ದಾನೆ. ರಾಮನ ಪ್ರಥಮ ಸಂದರ್ಶನ ವೇಳೆಯಲ್ಲಿ ಭಿಕ್ಷುವೇಷದಲ್ಲಿ ಕಾಣಿಸುತ್ತಾನೆ. ಭರತನ ನಂದಿಗ್ರಾಮದಲ್ಲಿ ಸಂಭಾಷಿಸಿದ ವೇಳೆ ಬ್ರಾಹ್ಮಣವೇಷದಲ್ಲಿ ಕಾಣಿಸುತ್ತಾನೆ. ಮಹಿರಾವಣನ ಕೊಲ್ಲುವಾಗ ಪಂಚಮುಖನಾಗಿ ತೋರುತ್ತಾನೆ. ಸಮುದ್ರಲಂಘನೆ ಮಾಡುವಾಗ ಸಿದ್ಧಪುರುಷನಾಗಿ ಬೆಳೆಯುತ್ತಾನೆ.

ನಾಮತತ್ತ್ವ: ಆಂಜನೇಯನಿಗೆ ಪ್ರಬಲವಾಗಿ ಇರುವ ನಾಮಗಳಲ್ಲಿ ಹನುಮನ್ನಾಮವು ಪ್ರಸಿದ್ಧವಾದದು. 'ಹನು' ಎಂದರೆ ಜ್ಞಾನವು. ಅಜ್ಞಾನವನ್ನು ಹನನ ಮಾಡುವನು ಹನುಮಂತ. ಕುಂಡಲಿನೀ ಯೋಗ ಸಾಧಕರಿಗೆ ಹನುಮಂತರೆಂದು ಹೆಸರು. ಸುಗ್ರೀವಸಖನೆಂದು ಮತ್ತೊಂದು ನಾಮ. ಸುಗ್ರೀವನೆಂದರೆ ವೇದವನ್ನು ಕ್ರಮಪದ್ಧತಿಯಲ್ಲಿ ಉಚ್ಚರಿಸುವ ಸಮರ್ಥನೆಂದು ವಿಶೇಷಾರ್ಥ, ಅಂತಹ ವ್ಯಕ್ತಿಗೆ ಸಖನೆಂದು ಅರ್ಥ.

ಗುಣತತ್ತ್ವ: ನಮ್ಮ ಜೀವನದಲ್ಲಿ ನವರಸಗಳು ಉಂಟು. ಆದರೆ ಹನುಮಜ್ಜೀವನದಲ್ಲಿ ಅದ್ಭುತವು ಮಾತ್ರವೇ. ಸೂರ್ಯಬಿಂಬವನ್ನು ನುಂಗುವದಕ್ಕೆ ಪ್ರಯತ್ನಿಸುವುದು, ಸಾಗರ ಲಂಘನೆ ಮಾಡುವುದು, ಒಬ್ಬನೇ ಲಂಕಾದಹನ ಮಾಡುವದು, ಸಂಜೀವಿನಿ ಪರ್ವತವನ್ನು ಎತ್ತುವುದು-ಎಲ್ಲವು ಅದ್ಭುತಕಾರ್ಯಗಳೇ. ಬಾಲ್ಯದಲ್ಲಿ ಯಾರು ವಿರೋಧಿಗಳೋ ಅವರ ಜತೆಯಲ್ಲಿ ಸ್ನೇಹ ಕೊಳುವದು ಹನುಮಂತನ ಚರಿತ್ರೆಯಲ್ಲಿ ಮತ್ತೊಂದು ವಿಶೇಷ. ಸೂರ್ಯಬಿಂಬವನ್ನು ಹಣ್ಣೆಂದು ನುಂಗಿದರೂ ಸೂರ್ಯನನ್ನೆ ಆಚಾರ್ಯನಾಗಿ ಭಾವಿಸಿ ವಿದ್ಯೆ ಕಲಿಯುವುದು ವಿಶೇಷ. ಅದೇಪ್ರಕಾರ ಇಂದ್ರನಿಂದ ಅವಮಾನ ಹೊಂದಿದರೂ ಇಂದ್ರಾದಿ ದೇವತೆಗಳ ಸ್ನೇಹ ಹೊಂದುವುದು ಮತ್ತೊಂದು ವಿಶೇಷ. ಕರ್ಮನಿಷ್ಠನಾಗಿ ಬಾಳುವುದು ಹನುಮಂತನ ಚರಿತ್ರೆಯಲ್ಲಿ ಕಾಣುವ ಮತ್ತೊಂದು ವಿಶೇಷ. ಸುಗ್ರೀವನು ಕಾಮ್ಯಬುದ್ಧಿಯಿಂದ ರಾಜ್ಯಕ್ಕಾಗಿ, ಪತ್ನಿಗಾಗಿ ಸ್ನೇಹ ಬೆಳೆಸಿದವನು ವಿಭೀಷಣನೂ ಕಾಮ್ಯಬುದ್ಧಿಯಿದ್ದವನೇ. ಆದರೆ ಹನುಮಂತನು ತನಗಾಗಿಯಲ್ಲದೆ ಪರರಿಗಾಗಿ ಜೀವಿಸಿದ. ರಾಮನಾಮ ಮಾಹಾತ್ಮ್ಯವನ್ನು ಜನರಿಗೆ ತಿಳಿಸಿದ. ಸೇತುಬಂಧನ ಮಾಡುವಕ್ಕೆ ರಾಮನಿಗೆ ವಾನರಸೇನೆ ಸಹಾಯ ಬೇಕಾಯಿತು ಸಾಗರ ಲಂಘನಕ್ಕೆ ರಾಮನಾಮವೊಂದೇ ಹನುಮಂತನಿಗೆ ಸಾಕಾಯಿತು. ಬ್ರಹ್ಮಚಾರಿ ಈ ಪದ್ಧತಿಯಲ್ಲಿರಬೇಕೆಂದು ತಾನೇ ಲಕ್ಷಣವಾಗಿ ಹೇಳಿಕೊಂಡವನು ಹನುಮಂತನೇ.

ಹನುಮಂತನ ಚರಿತ್ರೆಯಲ್ಲಿ ಚಾರಿತ್ರ್ಯಕ, ವೈಜ್ಞಾನಿಕ ಸತ್ಯಗಳನ್ನು ಕಾಣಬಹುದು. ಹನುಮಂತನು ದ್ರಾವಿಡರ ದೇವತೆ. ಆಟವಿಕ, ಗಿರಿಜನರ ಸ್ವಭಾವಗಳನ್ನು ಹನುಮಂತನಲ್ಲಿ ನೋಡಬಹುದು. ಆಟವಿಕರಲ್ಲಿ ಪೌರುಷ ಚಿಹ್ನೆಗಳುಂಟು. ಬಾಲದಂತೆ ಇರುವುದು ವೀರಚಿಹ್ನೆ. ಆದ್ದರಿಂದ ವಾನರಾಂಗನೆಗಳಿಗೆ ಬಾಲವಿಲ್ಲ. ಎಲೆ ಪೂಜೆ ಶಾಖಾಹಾರ ಪ್ರವೃತ್ತಿಯನ್ನು ಹೇಳುತ್ತದೆ, ಬೆಲ್ಲದ ಪಾನಕ, ವಡೆಮಾಲೆ ಇತ್ಯಾದಿ ನೈವೇದ್ಯಗಳು ಉಷ್ಣವನ್ನು ಕಡಿಮೆ ಮಾಡುತ್ತದೆ. ಬ್ರಹ್ಮಚಾರಿಗೆ, ವಿದ್ಯಾಭ್ಯಾಸವೇ ಲಕ್ಷ್ಯವಾಗಿದ್ದವನಿಗೆ ಶರೀರೋಷ್ಣವು ಅಧಿಕವಾಗಿರುತ್ತದೆ. ಆದ್ದರಿಂದ ಆಹಾರ ಪಾನೀಯದಲ್ಲಿ ನಿಯಮವು ಬೇಕಾಗಿರುತ್ತದೆ. ಹನುಮಂತರಾಯನು ಕೋತಿಯಲ್ಲ. ಕೋದು ಎನ್ನುವ ಜಾತಿಗೆ ಸೇರಿದವನು

ಅದೇ ಪ್ರಕಾರ ಸಮುದ್ರವನ್ನು ಪಾರ ಮಾಡುವದಲ್ಲಿ ರಾಡಾರ್ ಪ್ರಯೋಗವನ್ನು ಹೋಲಿಸಬಹುದು. ವೈನಾಕವನ್ನು ಬಿಡುವದು, ಛಾಯಾಗ್ರಾಹಿಕಯನ್ನು ಧ್ವಂಸ ಮಾಡುವುದು, ಪರ್ವತ ಸರೋವರದಲ್ಲಿ ಇಳಿಯುವುದು ರಾಡಾರ್‌ಪ್ರಯೋಗದಲ್ಲಿ ಆಕಾಶಪ್ರಯೋಗದಲ್ಲಿ ಕಾಣುವ ಚಿತ್ರಗಳು.

ಭೋಗಗಳನ್ನು ಕೊಡುವ ದೇವತೆಗಳು ಇದ್ದಾರೆ ಮೋಕ್ಷವನ್ನು ಪ್ರಸಾದಿಸುವ ದೇವತೆಗಳು ಇದ್ದಾರೆ. ಆದರೆ ಭೋಗವನ್ನು ಮೋಕ್ಷವನ್ನು ಕೊಡುವ ಮೂರ್ತಿ ಹನುಮಂತರಾಯನೇ.

ಬುದ್ಧಿರ್ಬಲಂ ಯಶೋಧೈರ್ಯಂ
ನಿರ್ಭಯತ್ವ ಮರೋಗತಾ
ಅಜಾಡ್ಯಂ ವಾಕ್ಪಟುತ್ವಂ ಚ
ಹನುಮತ್ ಸ್ಮರಣಾತ್ ಭವೇತ್



# ಪಂಚಾಯುಧ ಪರಿಚಯ

ತ್ರಿಮೂರ್ತಿಗಳಲ್ಲಿ ಒಬ್ಬನಾದ ಶ್ರೀಮನ್ನಾರಾಯಣನ ಪಾಲಿಗೆ ಬಂದ ಕರ್ತವ್ಯ "ಜಗದ್ರಕ್ಷಣ". ಧರ್ಮದರಕ್ಷಣೆಯಾದಾಗ ಜಗದ್ರಕ್ಷಣೆ ತಾನಾಗಿಯೇ ಆದೀತು. "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"–ಆದುದರಿಂದ ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನು ಸದಾ ಧರ್ಮರಕ್ಷಣಾ ತತ್ಪರ. ಈತನ ಅವತಾರವೂ ಇದೇ ಲಕ್ಷ್ಯದಿಂದಲೇ. –ಧರ್ಮಗ್ಲಾನಿ, ಅಧರ್ಮೋತ್ಥಾನಗಳಾದಾಗ ತಾನು ಅವತರಿಸುತ್ತೇನೆ – ಎಂದು ಭಗವಂತನು ಗೀತೆಯಲ್ಲಿ ನೇರವಾಗಿ ಹೇಳಿಕೊಂಡಿದ್ದಾನೆ. ಈ ಕಾರ್ಯಗಳ ಅಂಗವಾಗಿ ಸಾಧುಪರಿತ್ರಾಣ, ದುಷ್ಕೃತರನಾಶ ಇವುಗಳು ಅಗತ್ಯ.

ಧರ್ಮದ್ವೇಷಿಗಳೂ ಸ್ವಯಂ ಅಧರ್ಮಾನುಷ್ಠಾನನಿರತರೂ ಆದವರ ಸಂಹಾರಕ್ಕಾಗಿ ಭಗವಂತನ ಹಲವಾರು ಆಯುಧಗಳನ್ನು ಹಿಡಿದಿದ್ದಾನೆ. ಇವುಗಳಲ್ಲಿ ಮುಖ್ಯವಾದುವು ಐದು ಆಯುಧಗಳು. ಚಕ್ರ, ಶಂಖ, ಗದಾ, ಖಡ್ಗ, ಧನಸ್ಸು, ಇವೇ ಭಗವಂತನ ಪಂಚಾಯುಧಗಳು.

## ಸುದರ್ಶನ (ಚಕ್ರ)

ಸಾವಿರಾರು ಅಲಗುಗಳನ್ನು ಹೊಂದಿ ಕೋಟಿ ಸೂರ್ಯರಂತೆ ಮೆರುಗುತ್ತ, ದೇವದ್ವೇಷಿಗಳಾದ ದುಷ್ಕೃತರ ಸಂಹಾರಕ್ಕೆ ಸಿದ್ಧವಾಗಿರುವ ವಿಷ್ಣುವಿನ ಈ ಚಕ್ರಕ್ಕೆ "ಸುದರ್ಶನ" ಎಂದು ಹೆಸರು.

"ಶ್ರೀದಾಮ" ನೆಂಬ ದೈತ್ಯನು ಶ್ರೀಮನ್ನಾರಾಯಣನ "ಶ್ರೀವತ್ಸ" ವನ್ನು ಅಪಹರಿಸುವ ಇಚ್ಛೆಯುಳ್ಳವನಾಗಿದ್ದ. ಇದನ್ನು ತಿಳಿದ ವಿಷ್ಣುವು ಹಿಮಾಲಯದಲ್ಲಿ, ಪಶುಪತಿಯನ್ನು ತಪಸ್ಸಿನಿಂದ ಮೆಚ್ಚಿಸಿ ಈ ದಿವ್ಯಾಸ್ತ್ರವಾದ ಸುದರ್ಶನ ಚಕ್ರವನ್ನು ಪಡೆದನು ಎಂದು ವಾಮನ ಪುರಾಣದಲ್ಲಿ ಹೇಳಲಾಗಿದೆ.

ಇತರ ಕೆಲವಾರು ಪುರಾಣಗಳಲ್ಲಿನ ಕತೆ ಹೀಗಿದೆ–

ವಿಷ್ಣುವು ಶಿವನ ಅನುಗ್ರಹವನ್ನು ಪಡೆಯುವ ಸಲುವಾಗಿ ಕಾಶೀಕ್ಷೇತ್ರಕ್ಕೆ ಬಂದು ಸಾವಿರ ಕಮಲಗಳಿಂದ ಶಿವಪೂಜೆ ಮಾಡುತ್ತಿದ್ದಾಗ ಶಿವನು ಈತನ ಭಕ್ತಿಯನ್ನು ಪರೀಕ್ಷಿಸಲು ಒಂದು ಕಮಲವನ್ನು ಮಾಯಮಾಡಿದ. ಪೂಜೆಯು ಮುಗಿಯುವ ವೇಳೆಗೆ ಒಂದು ಕಮಲವಿಲ್ಲ, ಏನು ಮಾಡುವುದು ಎಂದು ಯೋಚಿಸಿ ಕಮಲನೇತ್ರನಾದ ಈತ ತನ್ನ ಕಣ್ಣನ್ನೇ ಕಿತ್ತು ಪೂಜೆ ಮಾಡಿ ಮುಗಿಸಿದ. ಶಿವ ಮೆಚ್ಚಿ ವಿಷ್ಣುವಿಗೆ ತ್ರೈಲೋಕಾಧಿಪತ್ಯವನ್ನೂ, ದುರ್ದೈತ್ಯನಿಗ್ರಹಶಕ್ತಿಯನ್ನೂ ಅನುಗ್ರಹಿಸಿ ಸುದರ್ಶನ ಚಕ್ರವನ್ನು ಕೊಟ್ಟ. ಇದು ನಡೆದಿದ್ದು ಕಾರ್ತೀಕ ಶುಕ್ಲ ಚತುರ್ದಶೀ ತಿಥಿಯಂದು. ಅಂದಿನಿಂದ ಈ ದಿನ ವೈಕುಂಠ ಚತುರ್ದಶಿ ಎಂದು ಪ್ರಸಿದ್ಧವಾಯಿತು.

ಮತ್ಸ್ಯಪುರಾಣದಲ್ಲಿ ಈ ಸುದರ್ಶನದ ಉತ್ಪತ್ತಿಯ ಬಗೆಗಿನ ಕಥೆಯಿಂತಿದೆ. ತ್ವಷ್ಟೃಬ್ರಹ್ಮನ ಮಗಳಾದ ಸಂಜ್ಞಾದೇವಿ, ಸೂರ್ಯನಹೆಂಡತಿ. ಈಕೆಯ ಮಕ್ಕಳು ವೈವಸ್ವತ ಯಮ ಹಾಗೂ ಯಮುನೆ. ಕಾಲಾಂತರದಲ್ಲಿ ಸಂಜ್ಞಾದೇವಿ ಸೂರ್ಯನ ತೇಜಸ್ಸನ್ನು ಸಹಿಸಲಾರದೆ, ತನ್ನಂತೆಯೇ ಒಬ್ಬ ಸ್ತ್ರೀಯನ್ನು ಕಲ್ಪಿಸಿ ಸೂರ್ಯದೇವನನ್ನು ಬಿಟ್ಟು ತನ್ನ ತಂದೆಯ ಮನೆಗೆ ಹೊರಟು ಹೋದಳು. ಛಾಯಾದೇವಿ ಕಾಲಕ್ರಮದಲ್ಲಿ "ಸಾವರ್ಣಿಮನು" ಮತ್ತು "ಶನೈಶ್ಚರ" ಇಬ್ಬರು ಮಕ್ಕಳನ್ನು ಪಡೆದಳು. ತಾನು ಹೆತ್ತ ಮಕ್ಕಳಲ್ಲಿ ಈಕೆಗೆ ಹೆಚ್ಚು ಮಮತೆಯಿದ್ದ ಕಾರಣ ಸಂಜ್ಞೆಯ ಮಕ್ಕಳನ್ನು ಸವತಿ ಮಾತ್ಸರ್ಯದಿಂದ ನೋಡಲಾರಂಭಿಸಿದಳು. ಯಮ ಇದನ್ನು ಸಹಿಸಲಾರದೆ ತಂದೆಗೆ ಹೇಳಿದ. ವಿಚಾರ ಮಾಡಿದ ಸೂರ್ಯನಿಗೆ ನಿಜಾಂಶ ತಿಳಿಯಿತು. ಒಡನೆಯೇ ಸಂಜ್ಞಾದೇವಿಯರನ್ನು ಹುಡುಕುತ್ತಾ ತ್ವಷ್ಟೃವಿನ ಬಳಿಗೆ ಬಂದನು. ಆತನು ವಿಷಯವನ್ನು ತಿಳಿದು ಸೂರ್ಯನ ತೇಜಸ್ಸನ್ನು ಕುಗ್ಗಿಸಿ ಮನೋಹರವಾಗುವಂತೆಮಾಡಿ, ಉತ್ತರಕುರುದೇಶದಲ್ಲಿ ಹೆಣ್ಣುಕುದುರೆಯ ರೂಪದಲ್ಲಿ ಸಂಚರಿಸುತ್ತಿದ್ದ ಸಂಜ್ಞೆಯಲ್ಲಿಗೆ ಕಳುಹಿಸ. ಸೂರ್ಯನು ಗಂಡುಕುದುರೆಯ ರೂಪದಿಂದ ಸಂಧಿಸಿದನು. ತ್ವಷ್ಟೃವು ಸೂರ್ಯನ ದೇಹದಿಂದ ಕೊರೆದು ತೆಗೆದ ತೇಜಸ್ಸಿನಿಂದಲೇ ಎರಡು ದಿವ್ಯಾಯುಧಗಳು, ಒಂದು ವಿಷ್ಣುವಿನ "ಚಕ್ರಾಯುಧ" ಇನ್ನೊಂದು ಶಿವನ "ತ್ರಿಶೂಲಾಯುಧ"

ವರಾಯುಧಂ ಹಿ ದೇವೇಶ
ಸರ್ವಾಯುಧ ನಿಬರ್ಹಣಂ ।
ಸುದರ್ಶನಂ ದ್ವಾದಶಾರಂ
ನವನಾಭಿ ದ್ವಿಜವಜ್ಞವೇ ॥

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಅರಾಸಂಸ್ಥಾಸ್ತ್ವಮೀ ತತ್ರ
ದೇವಾ ಮಾಸಾಶ್ಚ ರಾಶಯಃ ।
ಶಿಷ್ಟಾನಾಂ ರಕ್ಷಣಾರ್ಥಾಯ
ಸಂಸ್ಥಿತಾ ಋತವಶ್ಚಷಟ್

(ವಾಯುಪುರಾಣ)

ಈ ಸುದರ್ಶನ ಚಕ್ರವು ಸಕಲ ಆಯುಧಗಳನ್ನೂ ಎದುರಿಸಬಲ್ಲಶ್ರೇಷ್ಠವಾದ ಆಯುಧ. ಹನ್ನೆರಡು ಅರಗಳನ್ನು ಒಂಬತ್ತುನಾಭಿಗಳನ್ನು ಹೊಂದಿದೆ. ಗರುಡನಿಗೆ ಸಮಾನ ವೇಗವನ್ನು ಹೊಂದಿದ ಈ ದಿವ್ಯಾಯುಧದಲ್ಲಿ ಸಮಸ್ತ ದೇವತೆಗಳೂ, ಮಾಸದೇವತೆಗಳೂ, ರಾಶಿದೇವತೆಗಳೂ, ಷಡ್ರುತುದೇವತೆಗಳೂ, ವಾಸಿಸುತ್ತಾರೆ. ಶಿಷ್ಟರಕ್ಷಣೆಯೇ ಈ ಆಯುಧದ ಲಕ್ಷ್ಯ.

ನರಕಾಸುರ, ಶಿಶುಪಾಲ, ಇತ್ಯಾದಿ ದೈತ್ಯರನ್ನು ಸಂಹರಿಸಲು ನೆರವಾದಂತೆ "ಸುದರ್ಶನ" ಚಕ್ರ, ಅಂಬರೀಷ, ಗಜೇಂದ್ರ ಮೊದಲಾದ ಭಕ್ತರಿಗೆ ಒದಗಿಬಂದ ಸಂಕಷ್ಟಗಳನ್ನು ದೂರಮಾಡಲು ಸಹಾಯಕವಾಗಿದೆ.

ಅರ್ಚಾರೂಪದಲ್ಲಿ, ಸುದರ್ಶನನ ಆರಾಧನೆ ವಿಶಿಷ್ಟ ಫಲದಾಯಕ.

ಚಕ್ರಂ ಶಂಖಂ ಚ ಚಾಪಂ ಪರಶುಮಸಿಮಿಷುಂ
ಶೂಲ ಪಾಶಾಂಕುಶಾಗ್ನಿಂ ।
ಬಿಭ್ರಾಣಂವಜ್ರಖೇಟಂ ಹಲಮುಸಲ ಗದಾ
ಕುಂತಮತ್ಯುಗ್ರದಂಷ್ಟ್ರಂ ॥
ಜ್ವಾಲಾಕೇಶಂ ತ್ರಿನೇತ್ರಂ ಕನಕಮಯ
ಲಸದ್ಗಾತ್ರ ಮತ್ಯುಗ್ರರೂಪಂ ।
ವಂದೇಷಟ್ಕೋಣಮಧ್ಯಸಂಸ್ಥಂ
ಸಕಲ ರಿಪುಜನ ಪ್ರಾಣಸಂಹಾರಚಕ್ರಂ ॥

ಎಂಬುದು ಅರ್ಚಾವಿಗ್ರಹದ ಪೂರ್ಣಲಕ್ಷಣ. ಷಟ್ಕೋಣ ಮಧ್ಯವಾಸಿಯಾಗಿ ಸಮಸ್ತಶತ್ರುಜನರ ಪ್ರಾಣಾಪಹಾರಿಯಾದ ಸುದರ್ಶನದೇವ, ಶಂಖ, ಚಕ್ರ, ಧನಸ್ಸು, ಪರಶು, ಖಡ್ಗ, ಬಾಣ, ಶೂಲ, ಪಾಶ, ಅಂಕುಶ, ಅಗ್ನಿ, ಖಡ್ಗ, ಖೇಟ,

ಹಲ, ಮುಸಲ, ಗದಾ, ಶಂಖ – ಇವುಗಳನ್ನು ತನ್ನ ಷೋಡಶ ಭುಜಗಳಲ್ಲಿ ಧರಿಸಿದ್ದಾನೆ. ಈತನ ಕೇಶಜಾಲ, ಜ್ವಾಲಾಮಯವಾಗಿದೆ. ತ್ರಿನೇತ್ರನಾದ ಇವನು ಉಗ್ರವಾದ ಕೋರೆಗಳನ್ನು ಹೊಂದಿದ್ದಾನೆ

ವಿಹಗೇಶ್ವರ ಸಂಹಿತೆಯು ಉತ್ತರಕಾಂಡದಲ್ಲಿ ಉಮಾಮಹೇಶ್ವರ ಸಂವಾದ ರೂಪವಾದ ಸಹಸ್ರನಾಮ ಸ್ತೋತ್ರವು ಉಲ್ಲೇಖಿತವಾಗಿದೆ. "ಸರ್ವಜ್ಞ ಚೂಡಾಮಣಿ" ಎಂದು ಪ್ರಸಿದ್ಧರಾದ ಶ್ರೀ ವೈಷ್ಣವ ಸಂಪ್ರದಾಯದ ಶ್ರೀ ಮತ್ಕವಿತಾರ್ಕಿಕ ಸಿಂಹ ಯತೀಂದ್ರ ಮಹಾದೇಶಿಕರು–ಸುದರ್ಶನನ ಅನನ್ಯೋಪಾಸಕರಾಗಿ ಹಲವಾರು ಪವಾಡಗಳನ್ನು ನಡೆಸಿದ್ದರು – ಎಂಬ ಸಂಗತಿ ಅವರ ಜೀವನ ಚರಿತ್ರೆಯಿಂದ ತಿಳಿಯಬಹುದು ಈ ಮಹಾತ್ಮ ರಚಿಸಿದ "ಸುದರ್ಶನಶತಕ' ಅತ್ಯಂತ ಪ್ರಭಾವಯುತವಾದ ಸ್ತೋತ್ರ. ಕವಿ ತಾರ್ಕಿಕ ಕೇಸರಿಗಳೂ, ವೇದಾಂತಚಾರ್ಯವರ್ಯರೂ ಆದ ಶ್ರೀಮದ್ವೇಂಕಟನಾಥರು ವಿರಚಿಸಿದ 'ಶ್ರೀಸುದರ್ಶನಾಷ್ಟಕ' ಒಂದು ಪ್ರಸಿದ್ಧವಾದ ಸ್ತೋತ್ರವಾಗಿದೆ.

ಅಗ್ನಿಪುರಾಣದಲ್ಲಿ ಸುದರ್ಶನೋಪಾಸನೆಗೆ ಅಗತ್ಯವಾದ ಮಂತ್ರ, ಯಂತ್ರ ಇವುಗಳ ಬಗೆಗೆ ಹೆಚ್ಚಿನ ವಿಷಯಗಳು ಅಡಕವಾಗಿವೆ.

"ತೇಜಸ್ತತ್ತ್ವಂ ಸುದರ್ಶನಂ" ಎಂಬ ಭಾಗವತ ಹೋಕ್ತಿ, ಚಕ್ರವನ್ನು 'ತೇಜಸ್ತತ್ವ' ಎಂದು ಹೇಳಿದಂತೆ, ಗೋಪಾಲೋತ್ತರ ತಾಪನೀಯೋಪನಿಷತ್ತಿನಲ್ಲಿ "ಮನಶ್ಚಕ್ರಂ ನಿಗದ್ಯತೇ" ಎಂದು ಹೇಳಿ ಇದನ್ನು "ಮನಸ್ತತ್ತ್ವ" ಎನ್ನಲಾಗಿದೆ.

ಶ್ರೀವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿ 'ಚಕ್ರೀ' ಎಂಬ ವಿಷ್ಣುವಿನ ವಿಶೇಷಣ ವೆಂದು ಉಕ್ತವಾಗಿದೆ. "ಸಮಸ್ತಲೋಕರಕ್ಷಾರ್ಥಂ ಮನಸ್ತತ್ತ್ವಾತ್ಮಕಂ ಸುದರ್ಶನಾಖ್ಯಂ ಚಕ್ರಂಧತ್ತ ಇತಿ ಚಕ್ರೀ" ಎಂದು. ಒಂದೆಡೆಯಲ್ಲಿಯೂ "ಮನಸ್ತತ್ತ್ವಾತ್ಮಕಂ ಸುದರ್ಶನಾಖ್ಯಂ ಚಕ್ರ ಮಸ್ಯಾಸ್ತೀತಿ. ಸಂಸಾರಚಕ್ರಮಸ್ಯಾಜ್ಞಯಾ ಪರಿವರ್ತತ ಇತಿವಾ ಚಕ್ರೀ" ಎಂದು ಮತ್ತೊಂದೆಡೆಯಲ್ಲಿಯೂ ಭಾಷ್ಯಕಾರರಾದ ಶ್ರೀಶಂಕರ ಭಗವತ್ಪಾದರು ವಿವರಿಸಿದ್ದಾರೆ

ದಶರಥಪುತ್ರನಾದ ಶತ್ರುಘ್ನನು ಸುದರ್ಶನಾಂಶದಿಂದ ಅವತರಿಸಿದವನು. ಭಗವತ್ಕೈಂಕರ್ಯದಲ್ಲಿ ತಳೆದಾಗಿ ಮಣಿಗಿ, ಪ್ರನತ್ತಿಧರ್ಮವನ್ನು ಜನಸಾಮಾನ್ಯಕ್ಕೆ ಉಪದೇಶಮಾಡುವ ಸಲುವಾಗಿ ಅವತರಿಸಿದ ಮಹಾಪುರುಷರನ್ನು ಶ್ರೀ ವೈಷ್ಣವ ಸಂಪ್ರದಾಯದಲ್ಲಿ "ಆಳ್ವಾರ್" ಎಂದು ವ್ಯವಹರಿಸಲಾಗುವುದು. ಇವರಲ್ಲಿ ಶ್ರೀಭಕ್ತಿಸಾರಮುನಿ (ತಿರುಮಳಿಶೈ ಆಳ್ವಾರ್) ಎಂಬುವರು ಒಬ್ಬರು. ಇವರನ್ನು ಸುದರ್ಶನಾವತಾರ ಎಂದು ಭಾವಿಸಲಾಗುವುದು. ದಿವ್ಯಸೂರಿ ಚರಿತ್ರೆಯಲ್ಲಿ "ಸಾಗರ್ಭಮಾಸತ್ತ ಮುನೇಶ್ಚಪತ್ನೀ । ಸುದರ್ಶನಾಂಶೇನ ತದಾನು ವಿಷ್ಣುಂ" ಎಂದು ಈ ವಿಷಯವನ್ನು ವಿವರಿಸಲಾಗಿದೆ.

## ಪಾಂಚಜನ್ಯ (ಶಂಖ)

ಶ್ರೀಮನ್ನಾರಾಯಣನ ದಿವ್ಯಾಯುಧ ಶ್ರೇಣಿಯಲ್ಲಿ ಎರಡನೆಯದು "ಶಂಖ". ಇದಕ್ಕೆ "ಪಾಂಚಜನ್ಯ" ಎಂಬುದು ಅಪರನಾಮ. ಶಂಖವು ಶತ್ರುಗಳನ್ನು ನೇರವಾಗಿ ಸಂಹರಿಸುವ ಸಾಮರ್ಥ್ಯವಿಲ್ಲದ್ದಾದರೂ ಅವರ ಹೃದಯ ವಿದ್ರಾವಕಾರಿಯಾದ ಧ್ವನಿಯನ್ನು ಹೊಂದಿದೆ.

ವಿಷ್ಣೋರ್ಮುಖೋತ್ಥಾನಿಲ ಪೂರಿತಸ್ಯ
ಯಸ್ಯಧ್ವನಿರ್ದಾನವದರ್ಪಹಂತಾ ।
ತಂ ಪಾಂಚಜನ್ಯಂ ಶಶಿಕೋಟಿ ಶುಭ್ರಂ
ಶಂಖಂ ಸದಾಹಂ ಶರಣಂ ಪ್ರಪದ್ಯೇ
(ಪಂಚಾಯುಧಸ್ತೋತ್ರ)

ಮಹಾಭಾರತ ಯುದ್ಧದ ಆದಿಯಲ್ಲಿ ಶ್ರೀ ಕೃಷ್ಣನು ತನ್ನ ಶಂಖವಾದ ಪಾಂಚಜನ್ಯವನ್ನು ಧ್ವನಿಮಾಡಿದ ಎಂಬುದನ್ನು "ಪಾಂಚಜನ್ಯಂ ಹೃಷೀಕೇಶ" ಎಂಬ ಭಗವದ್ಗೀತಾ ವಾಕ್ಯದಿಂದ ತಿಳಿಯಬಹುದು

ಪಂಚಜನ ಎಂಬ ದೈತ್ಯನ ಕವಚ ವಾಗಿದ್ದುದರಿಂದ ಇದಕ್ಕೆ "ಪಾಂಚಜನ್ಯ" ಎಂಬ ಪದ ಅನ್ವರ್ಥ. ಪ್ರಹ್ಲಾದನ ತಮ್ಮನಾದ ಸಹ್ಲಾದ ಎಂಬ ರಾಕ್ಷಸನ ಮಗ ಈ "ಪಂಚಜನ". ಇವನು ಸಾಂದೀಪಿನಿ ಮಹರ್ಷಿಯ ಮಗನನ್ನು ಅಪಹರಿಸಿ ಸಮುದ್ರದಲ್ಲಿ ಅಡಗಿಕೊಂಡಿದ್ದ.

ಬಲರಾಮಕೃಷ್ಣರು ಸಾಂದೀಪಿನಿಯ ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ಬಳಿಕ ತಮಗೆ ಯಾವ ದಕ್ಷಿಣೆಯನ್ನು ಸಮರ್ಪಿಸಬೇಕೆಂದು ಗುರುವನ್ನು ಕೇಳಿದರು. ಆಗ ಗುರುವು ಪ್ರಭಾಸ ಕ್ಷೇತ್ರದಲ್ಲಿ ಕಣ್ಮರೆಯಾದ ತನ್ನ ಮಗನನ್ನೇ ತಂದೊಪ್ಪಿಸಬೇಕೆಂದು ಹೇಳಿದನು. ರಾಮಕೃಷ್ಣರು ಸಮುದ್ರನ ಬಳಿಗೆ ಹೋಗಿ ಆತನನ್ನು "ಗುರುಪುತ್ರನನ್ನು ತಮಗೆ ಒಪ್ಪಿಸುವಂತೆ" ಕೇಳಿದರು. "ನಿಮ್ಮಪುತ್ರನನ್ನು ಅಪಹರಿಸಿದವನು ನಾನಲ್ಲ. "ಪಂಚಜನ" ಎಂಬ ಅಸುರ, ತನ್ನಲ್ಲಿ ಆತನನ್ನು, ಅಡಗಿಸಿಕೊಂಡು ನನ್ನಲ್ಲಿ ಮುಳುಗಿದ್ದಾನೆ". ಎಂದು ಸಮುದ್ರನು ವಸ್ತುಸ್ಥಿತಿಯನ್ನು ತಿಳಿಸಿದಾಗ ಅವರು ಸಮುದ್ರವನ್ನುಹೊಕ್ಕು ಆ ದೈತ್ಯನನ್ನು ಸಂಹರಿಸಿ ಅವನ ದೇಹದಲ್ಲಿ ಗುರುಪುತ್ರನನ್ನು ಕಾಣದೆ ಯಮನ ಲೋಕಕ್ಕೆ ಹೋಗಿ ಗುರುಪುತ್ರನನ್ನು ಕರೆತಂದು ಸಾಂದೀಪಿನಿಗೆ ಒಪ್ಪಿಸಿದರು.

ಶ್ಯಮಂತಕಮಣಿಯನ್ನು ಅಪಹರಿಸಿದವನು ಎಂದು ತನಗೆ ಬಂದ ಅಪವಾದವನ್ನು ನೀಗಿಸಿಕೊಳ್ಳುವುದಕ್ಕಾಗಿ ಹೊರಟ ಶ್ರೀಕೃಷ್ಣನು ಕಟ್ಟಕಡೆಯಲ್ಲಿ ಜಾಂಬವಂತನ ಗುಹೆಯ ಬಳಿಗೆ ಬಂದು ಪಾಂಚಜನ್ಯವನ್ನು ಧ್ವನಿಮಾಡಿದ ವಿವರ ಶ್ರೀಮದ್ಭಾಗವತದಲ್ಲಿ ಉಕ್ತವಾಗಿದೆ. ಅಂತೆಯೇ ಪಾರಿಜಾತಾಪಹರಣಕ್ಕಾಗಿ ಸ್ವರ್ಗವನ್ನು ಪ್ರವೇಶಿಸಿದಾಗ ಅಲ್ಲಿನ ದ್ವಾರದಲ್ಲಿ "ಪಾಂಚಜನ್ಯ" ಘೋಷಮಾಡಿದ್ದ. (ವಿಷ್ಣುಪುರಾಣ) ಒಟ್ಟಿನಲ್ಲಿ

ಪಾಂಚಜನ್ಯವು ಧ್ವನಿ ವಿಶೇಷಕವಾಗಿ ಶ್ರೀ ವಿಷ್ಣುವಿನ ಕೈಸೇರಿತ್ತು.

“ಪಂಚಭೂತಾತ್ಮಕಂ ಶಂಖಂ ಕರೇ ರಜಸಿ ಸಂಸ್ಥಿತಂ” ಎಂಬ ಗೋಪಾಲೋತ್ತರ ತಾಪನೀಯೋಪನಿಷತ್ತಿನ ವಾಕ್ಯದಂತೆ ಪಾಂಚಜನ್ಯವು ಪಂಚಭೂತಾತ್ಮಕವಾಗಿ ವಿಷ್ಣುವಿನ [illegible] ಪ್ರಧಾನವಾದ ಹಸ್ತವನ್ನು ಅಲಂಕರಿಸಿದೆ. ಶ್ರೀಮದ್ಭಾಗವತದಲ್ಲಿ “ಅಪಾಂ ತತ್ತ್ವಂ ದರವರಂ” ಎಂದು ಹೇಳಲಾಗಿದೆ. ಇದರಂತೆ ಈ ಶಂಖ ಜಲತತ್ತ್ವಕ್ಕೆ ಸಂಬಂಧಿಸಿದ್ದು.

ಅರ್ಚಾವಿಗ್ರಹರೂಪಿಯಾದ ಶಂಖದೇವತೆ ಶುಕ್ಲವರ್ಣನೂ ಹಾಗೂ ಶುಭ್ರಲೋಚನನೂ ಆಗಿದ್ದಾನೆ. ಶಂಖೋಽಪಿ ಪುರುಷೋ ದಿವ್ಯಃ, ಶುಕ್ಲಾಂಗಃ ಶುಭ್ರಲೋಚನಃ (ವಿಷ್ಣುಧರ್ಮೋತ್ತರ ಪುರಾಣ)

ಶ್ರೀ ಶಂಕರ ಭಗವತ್ಪಾದರ ವಿಷ್ಣುಸಹಸ್ರನಾಮ ಭಾಷ್ಯದಲ್ಲಿ “ಶಂಖಭೃತ್” ಎಂಬ ನಾಮವನ್ನು ವಿಶ್ಲೇಷಿಸುತ್ತ ‘ ಪಾಂಚಜನ್ಯಾಖ್ಯಂ ಭೂತಾದ್ಯಹಂಕಾರಾತ್ಮಕಂ ಶಂಖಭೃತ್ ” ಎಂದಿದ್ದಾರೆ. ಇದರಿಂದ ಇದು ಅಹಂಕಾರಾತ್ಮಕ ಎಂದು ಸೂಚಿಸಿದಂತಾಗಿದೆ. “ತುಲಾಯಾಂ ಶ್ರವಣೇ ಜಾತಂ ಕಾಂಚ್ಯಾಂ ಕಾಂಚನ ವಾರಿಜಾತ್ ” “ದ್ವಾಪರೇ ಪಾಂಚಜನ್ಯಾಂಶಂ ಸರೋಯೋಗಿನ ಮಾಶ್ರಯೇ”. ದಿವ್ಯಸೂರಿಪರಂಪರೆಯಲ್ಲಿ ಒಬ್ಬರಾದ ಶ್ರೀಸರೋಯೋಗಿಗಳು(ಪೊಯ್ಗೈ ಆಳ್ವಾರ್) ದ್ವಾಪರದಲ್ಲಿ ಅವತರಿಸಿದವರು.

ಕೈಕೇಯಿಯ ಪುತ್ರನಾದ ಭರತನನ್ನು ಪಾಂಚಜನ್ಯಾಂಶವೆಂದು ರಾಮಾಯಣಾಂತರದಲ್ಲಿ ಹೇಳಲಾಗಿದೆ.

## ಕೌಮೋದಕೀ (ಗದಾ)

ಹಿರಣ್ಯಾಕ್ಷಾದಿ ದೈತ್ಯರ ಸಂಹಾರದ ವೇಳೆಯಲ್ಲಿ ಉಪಯೋಗಿಸಲ್ಪಟ್ಟ ಆಯುಧ “ಗದಾ” ಇದಕ್ಕೆ ಕೌಮೋದಕೀ ಎಂದು ಹೆಸರು. “ಕೋಃ ಪೃಥಿವ್ಯಾಃ ಪಾಲಕತ್ವಾತ್ ಮೋದಕಃ” ಎಂಬ ಉತ್ಪತ್ತಿಯಂತೆ ಜಗತ್ ಸಂರಕ್ಷಣೆಯ ಮೂಲಕವಾಗಿ ಸಂತೋಷವನ್ನು ಉಂಟುಮಾಡುವ ಆಯುಧವಿದು.

ಹಿರಣ್ಮಯೀಂ ಮೇರು ಸಮಾನ ಸಾರಾಂ
ಕೌಮೋದಕೀಂ ದೈತ್ಯಕುಲೈಕ ಹಂತ್ರೀಂ ।
ವೈಕುಂಠ ವಾಮಾಗ್ರ ಕರಾಭಿ ಮೃಷ್ಟಾಂ
ಗದಾಂ ಸದಾಹಂ ಶರಣಂ ಪ್ರಪದ್ಯೇ

“ಕೌಮೋದಕೀ ಗದಾ ” ಮೇರುವಿನಂತೆ ಅತ್ಯಂತ ಪ್ರಭಾವಶಾಲಿಯೂ ಸುವರ್ಣಮಯಿಯೂ ಆಗಿ, ವಿಷ್ಣುವಿನ ವಾಮಕರದಲ್ಲಿ ಶೋಭಿಸುತ್ತಿರುವುದು.

ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಪುತ್ರನಾದ ‘ಹೇತಿರಕ್ಷ” ಎಂಬುವನು ಅನ್ನಪಾನಾದಿಗಳನ್ನು ಬಿಟ್ಟು ಒಂಟಿಕಾಲಿನಲ್ಲಿ ನಿಂತು ಊರ್ಧ್ವಬಾಹುವಾಗಿ ಭಯಂಕರವಾದ ತಪಸ್ಸನ್ನು ಮಾಡಿ ಬ್ರಹ್ಮಾದಿಗಳನ್ನು ಮೆಚ್ಚಿಸಿ ತನಗೆ ಇಷ್ಟವಾದ ವರವನ್ನು ಪಡೆದನು. ಈ ವರದ ಪ್ರಭಾವದಿಂದ ವಿಶ್ವದಲ್ಲಿರುವ ತಾತ್ಕಾಲಿಕವಾದ ಯಾವ ಆಯುಧದಿಂದಲೂ, ಆತನನ್ನು ಸಂಹರಿಸಲಾಗಲಿಲ್ಲ. ಆದುದರಿಂದಲೇ ದೇವಲೋಕವನ್ನು ತನ್ನ ವಶಕ್ಕೆ ತೆಗೆದುಕೊಂಡು ಇಂದ್ರನ ಸಿಂಹಾಸನವನ್ನು ಏರಿ, ಅಲೌಕಿಕ ಸುಖಸಂಪತ್ತನ್ನು ಅನುಭವಿಸಲಾರಂಭಿಸಿದನು. ದೇವೇಂದ್ರಾದಿಗಳು ವಿಷ್ಣುವಿನ ಮೊರೆಹೊಕ್ಕರು. ಆಗ ಆತನು “ಮಹಾಸ್ತ್ರಂ ಮೇ ಪ್ರಯಚ್ಛಧ್ವಂ ಹೇತಿಂ ಹನ್ಮಿ ಯೇನತಂ” ಎಂದು ನೂತನವಾದ ಮಹಾಸ್ತ್ರವನ್ನು ಒದಗಿಸಿ ಕೊಡುವುದಾದರೆ ಅದರಿಂದ “ಹೇತಿರಕ್ಷ” ನನ್ನು ಸಂಹರಿಸಲು ಸಾಧ್ಯ ಎಂದನು.

ಗದೋ ನಾಮಾಸುರೋ ಹ್ಯಾಸೀತ್
ವಜ್ರಾದ್ ವಜ್ರಕರೋದೃಢಃ ।
ಪ್ರಾರ್ಥಿತೋ ಬ್ರಹ್ಮಣೇ ಪ್ರಾದಾತ್
ಸ್ವಶರೀರಾಸ್ಥಿ ದುಸ್ತ್ಯಜಂ ।
ಬ್ರಹ್ಮೋಕ್ತೋ ವಿಶ್ವಕರ್ಮಾಪಿ ಗದಾ
ಚಕ್ರೇಽಸ್ಯ ಕಾಂತದಾ
(ವಾಯುಪುರಾಣ)

ವಜ್ರಕ್ಕಿಂತಲೂ ಕಠಿಣ ಶರೀರವುಳ್ಳ “ಗದ” ಎಂಬ ರಾಕ್ಷಸನನ್ನು ಬ್ರಹ್ಮನು ಪ್ರಾರ್ಥಿಸಲಾಗಿ, ಆತ ತನ್ನ ಮೂಳೆಯನ್ನು ಕೊಟ್ಟನು. ಆಗ ವಿಶ್ವಕರ್ಮನಿಂದ ಬ್ರಹ್ಮನು ಈ ಅಸ್ಥಿಯಲ್ಲಿ “ಗದೆ” ಎಂಬ ನೂತನವಾದ ಆಯುಧವನ್ನು ತಯಾರಿಸಿ ಶ್ರೀಮನ್ನಾರಾಯಣನಿಗೆ ಕೊಟ್ಟನು. ಇದರಿಂದ ಹೇತಿಯನ್ನು ಸಂಹರಿಸಿದ ವಿಷ್ಣುವು “ಗದಾಧರ” ನಾದನು.

“ಗದಾ” ಎಂಬುದು “ಬುದ್ಧಿ ತತ್ತ್ವಾತ್ಮಿಕಾ” ಎಂದು ವಿಷ್ಣುಸಹಸ್ರನಾಮ ಭಾಷ್ಯ. ಆದ್ಯಾ ವಿದ್ಯಾ ಗದಾ ವೇದ್ಯಾ ಸರ್ವದಾ ಮೇ ಕರೇ ಸ್ಥಿತಾ ( ಗೋಪಾಲೋತ್ತರತಾಪನಿಯೋಪನಿಷತ್ ) ಎಂಬಂತೆ ಇದು ಆದಿವಿದ್ಯಾ. “ಓಜಸ್ಸಹೋಬಲಯುತಂ ಮುಖ್ಯತತ್ತ್ವಂ ಗದಾಂ ದಧತ್” ಎಂಬುದು ಶ್ರೀಮದ್ಭಾಗವತದ ವಚನ. ಮನಸ್ಸು ಇಂದ್ರಿಯಮತ್ತು ಶರೀರ ಸಂಬಂಧವಾದ ಶಕ್ತಿಯಿಂದ ಕೂಡಿದ ಈ ಪ್ರಾಣತತ್ತ್ವಸ್ವರೂಪವೇ ಈ “ಗದ” (ಗದಾ)

ಗದೇಶನಿ ಸ್ಪರ್ಶನ ವಿಸ್ಫುಲಿಂಗೇ
ನಿಷ್ಪಿಂಢಿ ನಿಷ್ಪಿಂಢ್ಯಜಿತ ಪ್ರಿಯಾಸಿ ।
ಕೂಷ್ಮಾಂಡವೈನಾಯಕ ಯಕ್ಷರಕ್ಷೋ
ಭೂತಗ್ರಹಾಂಶ್ಚ ಚೂರ್ಣಯ
ಚೂರ್ಣಯಾರೀನ್

ಕೌಮೋದಕೀಗದಾ ದೇವಿಯೇ! ನಿನ್ನಿಂದ ಹೊರ ಹೊಮ್ಮುವ ಅಗ್ನಿಕಣಗಳು ವಜ್ರಾಯುಧದ ಪ್ರಹಾರದಂತೆ ಅತ್ಯಂತ ಪ್ರಭಾವವುಳ್ಳವು. ನೀನು ಅಜಿತನಾದ ವಿಷ್ಣುವಿಗೆ ಅತ್ಯಂತ ಪ್ರಿಯಳಾದವಳು. ಕೂಷ್ಮಾಂಡ ವಿನಾಯಕಾದಿ ದುಷ್ಟ ಶಕ್ತಿಗಳನ್ನು ನನ್ನ ಶತ್ರುಗಳನ್ನು ನಾಶಗೊಳಿಸು-ಎಂಬುದು ಶ್ರೀಮದ್ಭಾಗವತ ಮಹಾಪುರಾಣದಲ್ಲಿರುವ ಗದಾಯುಧದ ಪ್ರಾರ್ಥನೆ. ಶ್ರೀಭೂತಮುನಿ (ಪೂದತ್ತಾಳ್ವಾರ್) ಎಂಬುವರು ಶ್ರೀಗದಾಂಶ ಸಂಭೂತರೆಂದು ಶ್ರೀವೈಷ್ಣವ ಸಂಪ್ರದಾಯದಲ್ಲಿ ನಂಬಲಾಗಿದೆ.

## ನಂದಕ (ಖಡ್ಗ)

ರಕ್ಷೋಽಸುರಾಣಾಂ ಕಠಿನೋಗ್ರ ಕಂಠ—
ಚ್ಛೇದಕ್ಷರ ಚ್ಛೋಣಿತ—ದಿಗ್ಧಧಾರಂ
ತಂ ನಂದಕಂ ನಾಮ ಹರೇಃ ಪ್ರದೀಪ್ತಂ
ಖಡ್ಗಂ ಸದಾಹಂ ಶರಣಂ ಪ್ರಪದ್ಯೇ

ದುಷ್ಟರಾದ ರಾಕ್ಷಸರ ಕುತ್ತಿಗೆಗಳನ್ನು ಕತ್ತರಿಸಿದ ಫಲವಾಗಿ ಅಂಟಿಕೊಂಡ ರಕ್ತಧಾರೆಯುಳ್ಳ, ಮೆರುಗುತ್ತಿರುವ ಶ್ರೀವಿಷ್ಣುವಿನ ಖಡ್ಗವಾದ ನಂದಕವೆಂಬ ಆಯುಧವನ್ನು ಸರ್ವದಾ ಶರಣು ಹೋಗುತ್ತೇನೆ.

ಈ ಖಡ್ಗಾಯುಧವು ಪ್ರಪ್ರಥಮವಾಗಿ ಬ್ರಹ್ಮದೇವನ ಯಜ್ಞಕುಂಡದಿಂದ ಉತ್ಪನ್ನವಾಯಿತು. “ಬ್ರಹ್ಮಾದದಾವಸಿಂ ತೀಕ್ಷ್ಣಂ ಮಧರ್ಮಪ್ರತಿವಾರಣಂ ತತಃ ಸಭಗವಾನ್ ರುದ್ರೋ ದಾನವಕ್ಷತಜೋಕ್ಷಿತಂ ಅಸಿಂ ಧರ್ಮಸ್ಯ ಗೋಪ್ತಾರಂ ದದಾ ಸತ್ಕೃತ್ಯ ವಿಷ್ಣವೇ”ಎಂಬಂತೆ ಈ ಖಡ್ಗವು ಮೊದಲು ಬ್ರಹ್ಮನಿಂದ ರುದ್ರನಿಗೆ ಕೊಡಲ್ಪಟ್ಟು ನಂತರ ಆತನಿಂದ ಧರ್ಮರಕ್ಷಣೆಗಾಗಿ ವಿಷ್ಣುವಿಗೆ ಕೊಡಲ್ಪಟ್ಟಿತು.

ನಂದಕವು ಆಕಾಶ ತತ್ತ್ವರೂಪವಾದದ್ದು. ಪುರುಷಾಯುಧವಾದ ಇದರ ಆಕಾರರೂಪ “ಖಡ್ಗಶ್ಚ ಪುರುಷಃ ಶ್ಯಾಮಶರೀರಃ ಕ್ರುದ್ಧಲೋಚನಃ” ಎಂಬಂತೆ ನೀಲಶರೀರವನ್ನು ಕೋಪದ ಕಣ್ಣುಗಳನ್ನು ಪಡೆದಿರುವ ರೂಪವಿದು

ತುಲಾ–ಶತ–ಭಿಷಗ್ಜಾತಂ
ಮಯೂರಪುರಿ ಕೈರವಾತ್
ಮಹಾಂತಂ ಮಹದಾಖ್ಯಾತಂ
ವಂದೇ ಶ್ರೀ ನಂದಕಾಂಶಕಂ

ಎಂಬ ಪ್ರಾರ್ಥನಾ ಪದ್ಯದಂತೆ ಮಹಾಹ್ವಯ ಮುನಿಗಳು (ಪೇಯಾಳ್ವಾರ್) ಎಂಬುವರು ನಂದ ಕಾಂಶದಿಂದ ಜನಿಸಿದ ಶ್ರೀವೈಷ್ಣವ ಆಳ್ವಾರ್.

## ಶಾರ್ಙ್ಗ (ಬಿಲ್ಲು)

ಪಂಚಾಯುಧದ ಶ್ರೇಣಿಯಲ್ಲಿ ಕಟ್ಟಕಡೆಯದು ಶಾರ್ಙ್ಗಧನಸ್ಸು

ಯಜ್ಜ್ಯಾನಿನಾದ ಶ್ರವಣಾತ್ ಸುರಾಣಾಂ
ಚೇತಾಂಸಿ ನಿರ್ಮುಕ್ತಭಯಾನಿ ಸದ್ಯಃ
ಭವಂತಿ ದೈತ್ಯಾಶನಿ ಬಾಣವರ್ಷಿ
ಶಾರ್ಙ್ಗಂ ಸದಾಹಂ ಶರಣಂ ಪ್ರಪದ್ಯೇ

ಯಾವ ಧನುಷ್ಟಂಕಾರವನ್ನು ಕೇಳಿದೊಡನೆಯೇ ದೇವತೆಗಳ ಮನಸ್ಸಿನ ಭಯವು ನಿವಾರಿಸಲ್ಪಡುತ್ತಿತ್ತೋ, ಅಂತೆಯೇ ಯಾವುದರಿಂದ ರಾಕ್ಷಸರ ಪ್ರಾಣಾಪಹಾರಕಗಳಾದ ಬಾಣಗಳು ಹೊರಹೊಮ್ಮುತ್ತಿದ್ದವೋ, ಅಂತಹ "ಶಾರ್ಙ್ಗ" ಧನುಸ್ಸನ್ನು ಶರಣು ಹೋಗುತ್ತೇನೆ.

ಈ ಧನುಸ್ಸಿನ ಉತ್ಪತ್ತಿಯ ಬಗೆಗಿನ ಕಥೆ ಶ್ರೀಮನ್ಮಹಾಭಾರತದಲ್ಲಿ ಶಿವ ಪಾರ್ವತಿಯರ ಸಂವಾದ ರೂಪವಾಗಿ ಉಲ್ಲೇಖಿತವಾಗಿದೆ:

ಯುಗಾಂತರದಲ್ಲಿ ಕಣ್ವಮಹರ್ಷಿಗಳು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಘೋರವಾದ ತಪಸ್ಸನ್ನು ಮಾಡಿ ಬ್ರಹ್ಮದೇವನಿಂದ ಅಪೇಕ್ಷಿತವಾದ ವರವನ್ನು ಪಡೆದರು. ಆ ಮಹರ್ಷಿಗಳು ತಪಸ್ಸು ಮಾಡಿದ ಸ್ಥಳದಲ್ಲಿ ಬಿದುರಿನ ಪೊದೆ ಬೆಳೆದಿತ್ತು. ಇದರಿಂದ ಜಗತ್ತಿಗೆ ಉಪಕಾರವಾಗುವ ವಸ್ತುವೊಂದನ್ನು ರಚಿಸಬೇಕೆಂದು ನಿಶ್ಚಯಿಸಿ ಆಕಾಲದಲ್ಲಿ ಮೂರು ಧನಸ್ಸುಗಳನ್ನು ನಿರ್ಮಾಣ ಮಾಡಿದರು. ಒಂದರ ಹೆಸರು "ಪಿನಾಕ" ಮತ್ತೊಂದು "ಶಾರ್ಙ್ಗ" ಪಿನಾಕ ಪರಶಿವನ ಕೈಸೇರಿತು. ಶಾರ್ಙ್ಗ ಧನಸ್ಸು ವಿಷ್ಣುವಿನದಾಯಿತು. ಮೂರನೆಯದಾದ "ಗಾಂಡೀವ" ವರುಣನ ಅಧಿಕಾರಕ್ಕೆ ಒಳಪಟ್ಟಿತು. ಮುಂದೆ ಈ ಗಾಂಡೀವವೇ ಅರ್ಜುನನಿಗೆ ಲಭಿಸಿ ಆತ "ಗಾಂಡೀವಿ" ಎಂದು ಪ್ರಸಿದ್ಧನಾದ. "ಕಾಲರೂಪಂ ಧನುಶ್ಶಾರ್ಙ್ಗಂ" ಆದ್ಯಾಮಾಯಾ ಭವೇಚ್ಛಾರ್ಙ್ಗಂ ಇತ್ಯಾದಿ ಉಕ್ತಿಗಳಂತೆ ಈ ಧನುಸ್ಸು ಕಾಲರೂಪ. ಅಂತೆಯೇ ಆದೀಮಾಯಾರೂಪ 'ಇಂದ್ರಿಯಾದ್ಯಹಂಕಾರ ತತ್ತ್ವಾತ್ಮಕಂ ಶಾರ್ಙ್ಗಂ ನಾಮ ಧನುರಸ್ತ್ರೀತಿ ಶಾರ್ಙ್ಗಧನ್ವಾ' ಎಂಬ ಶ್ರೀ ಶಾಂಕರಭಾಷ್ಯದಂತೆ ಈ ಶಾರ್ಙ್ಗ ಧನುಸ್ಸು ಇಂದ್ರಿಯಾದ್ಯಹಂಕಾರತತ್ತ್ವಾತ್ಮಕ.

ದಿವ್ಯಸೂರಿ ಆಳ್ವಾರ್ ಪರಂಪರೆಯಲ್ಲಿ ಶ್ರೀಪರಕಾಲಸೂರಿ ಅಥವಾ ತಿರುಮಂಗೈ ಆಳ್ವಾರ್ ಎಂಬುವರು ಶ್ರೀಮನ್ನಾರಾಯಣನ ಆಯುಧವಾದ ಶಾರ್ಙ್ಗಾಂಶ ಸಂಭೂತರು.

ವೃಶ್ಚಿಕೇ ಕೃತ್ತಿಕಾಜಾತಂ
ಚತುಷ್ಕ ವಿಶಿಖಾಮಣಿಂ
ಷಟ್ ಪ್ರಬಂಧಕೃತಂ
ಶಾರ್ಙ್ಗ ಮವತಾರಂ ಕಲಿಹನಂ ಭಜೇ

ಒಟ್ಟಿನಲ್ಲಿ ಜಗದ್ರಕ್ಷಕನಾದ ಶ್ರೀಮನ್ನಾರಾಯಣನ ಕರಕಮಲಗಳಲ್ಲಿ ಮೆರೆಯುತ್ತಿರುವ ಧರ್ಮರಕ್ಷಣೆಯ ಪವಿತ್ರ ಕಾರ್ಯವನ್ನು ಹೊತ್ತ ಈ ಪಂಚಾಯುಧಗಳಿಗೆ ನಮೋನಮೋ.

ನಮಸ್ತೇ ಚಕ್ರಹಸ್ತಾಯ
ಶಾರ್ಙ್ಗಹಸ್ತಾಯತೇ ನಮಃ
ಗದಾ ಹಸ್ತಾಯತೇ ವಿಷ್ಣೋ
ಶಂಖ ಹಸ್ತಾಯತೇ ನಮಃ (ವಿಷ್ಣು ಪುರಾಣ) ★

# ಸುಂದರಕಾಂಡದ ಕೀರ್ತನೆಗಳು

'ತಿಣಿಕಿದರು, ಫಣಿರಾಯ. ರಾಮಾಯಣದ ಕವಿಗಳ ಭಾರದಲಿ' ಎನ್ನುವಂತೆ ಕನ್ನಡ, ಸಂಸ್ಕೃತ ಹಾಗೂ ಇತರ ಭಾಷೆಗಳಲ್ಲಿ ರಾಮಾಯಣ ಸಾಹಿತ್ಯವು ವಿಪುಲವಾಗಿದ್ದರೂ, ಅವುಗಳಲ್ಲಿ ವೈವಿಧ್ಯ, ವೈಶಿಷ್ಟ್ಯಗಳಿವೆ. ಶ್ರೀಕೃಷ್ಣದಾಸರು ರಚಿಸಿದ ರಾಮಾಯಣ ಅದರಲ್ಲಿಯೂ 'ಸುಂದರಕಾಂಡ'ವನ್ನು ಅವಲೋಕಿಸಿದಾಗ ಇದೊಂದು ಜನಪದಸಾಹಿತ್ಯವೆನ್ನಲು ಅಡ್ಡಿಯಿಲ್ಲ. ಜನಪದ ಧಾಟಿಯಲ್ಲಿಯೇ ಇವರ ಕೀರ್ತನೆ ಪ್ರಾರಂಭವಾಗುತ್ತದೆ.

ಶ್ರೀರಾಮಚರಿತವಕೇಳಿ । ಹರುಷದಲಿಬಾಳಿ
ಇಳೆಯೊಳು ಸುಗ್ರೀವನ ಮನೋರಥವನು ।
ಸಲಹುತ ಸ್ವಸ್ಥಾನದಲಿಡಲಿ ।
ಬಳಿಕ ರಘುಪತಿ ಸಾಹ್ಯದ ಸೇವೆಗೆ ।
ದಳನೆರಹಿದ ಕಿಷ್ಕಿಂಧೆಯಲಿ ॥

ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು ಕಿಷ್ಕಿಂಧೆ. ಈ ಹನುಮನೇ ಸುಂದರಕಾಂಡದ ನಾಯಕ. ವಾನರರಾಜನಾದ ಸುಗ್ರೀವನು ಕಿಷ್ಕಿಂಧೆಯಲ್ಲಿ ಒಡೆಯನಾಗಿರುವಾಗ ಅಗಲಿದ ಸೀತೆಯನ್ನು ಹುಡುಕುತ್ತ ಶ್ರೀರಾಮಲಕ್ಷ್ಮಣರು ಅಲ್ಲಿಗೆ ಬರುವರು; ಸುಗ್ರೀವನು ಅವರನ್ನು ಆದರದಿಂದ ಬರಮಾಡಿಕೊಳ್ಳುವನು. ಹನುಮ, ಜಾಂಬವ, ನಲ, ನೀಲ ಮೊದಲಾದ ವಾನರ ಪ್ರಮುಖರ ಪರಿಚಯ ಮಾಡಿಕೊಡುವನು. ಶ್ರೀರಾಮಚಂದ್ರನು ಅವರಿಗೆ ಸೀತೆಯ ಸುದ್ದಿಯನ್ನು ತರುವ ದೂತಕಾರ್ಯವನ್ನು ಒಪ್ಪಿಸುವನು; ಹನುಮಂತನನ್ನು ಪ್ರತ್ಯೇಕವಾಗಿ ಕರೆದು ಅವನಿಗೆ ಗುರುತಿನ ಉಂಗುರ (ಮುದ್ರಿಕೆ) ಕೊಟ್ಟು ಜಾನಕಿಯ ಸಂದೇಶವನ್ನು ತರಲು ಹೇಳುವನು. ಹನುಮಂತನು ದಕ್ಷಿಣಕ್ಕೆ ಸಾರಿ ಸಮುದ್ರೋಲ್ಲಂಘನ ಮಾಡಲು ಅಣಿಯಾದನು.

'ಒಳ್ಳೆಯಕಾರ್ಯಕ್ಕೆ ವಿಘ್ನಗಳು ಬಹಳ' ಎನ್ನುವಂತೆ, ಹನುಮಂತನು ಸಮುದ್ರದಾಟುವ ಕಾಲಕ್ಕೆ ವಿಘ್ನಗಳು ಬಂದವು. ಅವನ ಶೂರತನವನ್ನು ಪರೀಕ್ಷಿಸಲು, ಬಂದ ಸುರಸೆ, ಸಿಂಹಿಕೆ ಮೊದಲಾದ ದೈತ್ಯೆಯರನ್ನು ಅನಾಯಾಸವಾಗಿ ಸಂಹರಿಸಿದನು. ಮೈನಾಕಪರ್ವತವನ್ನು ಸಮುದ್ರಕ್ಕೆ ಒತ್ತಿ ಮುಂದೆ ಸಾಗಿದನು. ಸಮಯಸ್ಫೂರ್ತಿ, ವಿವೇಕ; ಧೈರ್ಯ, ದಕ್ಷತೆಗಳಿಂದ ಮುನ್ನುಗ್ಗುತ್ತಿರುವ ಹನುಮಂತನು ತೃಣಬಿಂದು ಮುನಿಯಿಂದ ಮಾರ್ಗದರ್ಶನ ಪಡೆದು ಲಂಕಾಪುರಕ್ಕೆ ಸಾಗಿದನು.

ಶ್ರೀ ಬಿ. ಎ. ಗುಡಿ

ಹನುಮನ ಮಹಿಮೆಯನೋಡಿ ।
ಅನುದಿನದಲಿಪಾಡಿ ।
ರಘುಪತಿ ಆಜ್ಞೆವ ಕೊಳುತಲಿ ಹಾರಿದ ।
ಗಗನಕೆ ಇಳಿದನು ಲಂಕೆಯಲಿ ॥
ವಿಗಡದೈತ್ಯರ ಮೊತ್ತವನೋಡುತ ।
ಪ್ರಗಟದಿ ತೋರದೆ ತಿರುಗಿದನು ॥

ಒಂದೇ ಕಣ್ಣು, ಒಂದುಕಿವಿ, ಜೋತು ಬಿದ್ದ ಹೊಟ್ಟೆ, ಸೊಟ್ಟಮೋರೆ, ಡೊಂಕು ಮೈಯುಳ್ಳವರು 'ವಿಗಡದೈತ್ಯರು'. ಇವರ ಸಮೂಹವನ್ನೇ ನೋಡುತ್ತ, ಹನುಮಂತನು ಅಣುರೂಪಿನಲಿ ಲಂಕಾಪಟ್ಟಣವ ಹೊಕ್ಕು, ಆದರ ಚೆಲುವಿಕೆಯನು ನೋಡಿದನು ಲಂಕಾಪುರದ ವರ್ಣನೆ—







ಓಂ ಶ್ರೀ ಮಾತ್ರೇ ನಮಃ
ಫೋನ್ :
ಕಚೇರಿ : 472013
ಮನೆ : 861254

# ನವಶಕ್ತಿ ನಿಲಯ ದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯಾರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರು ಮಾಡುವ ಸಂಸ್ಥೆ.

1 ಶ್ರೀಚಕ್ರ ಮಹಾಮೇರು (ಪಂಚಲೋಹ)
16×16 cm ಹಾಗೂ 10×10cm
4½ × 4½ cm. ರೂ. 350–00

2. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130–00
(ತಾಪತ್ರಯಗಳನ್ನು ದೂರಮಾಡುವುದು)

3. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
24×24 cm ರೂ. 1100–00
(3ತಲೆಮಾರು ಪ್ರಭಾವಬೀರಿ, ಸಂತಸ ಸಂಪತ್ತು ಸುಖ ನೀಡುವುದು)

4. ಶ್ರೀಚಕ್ರ (ಸರ್ವದೇವತೆಗಳೊಂದಿಗೆ)8×8cm ರೂ. 130–00

5. ಸರ್ವಜನ ಮನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನಂ 16×48 cm ರೂ. 1650–00
(ವ್ಯವಹಾರ, ಸಂಪತ್ತು, ಸಂತಸ, ಶಾಂತಿ ಅಭಿವೃದ್ಧಿಗೆ,
ಕೆಟ್ಟ ಕಣ್ಣಿನ ದೋಷ ನಿವಾರಣೆಗೆ)

6. ಸರ್ವಜನ ಮನಧನ ಆಕರ್ಷಣ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನ ಯಂತ್ರ 8×24 cm ರೂ. 450–00
(ಮೇಲಿನಂತೆಯೇ)

7. ಶೂಲಿನಿ, ಶರಭೇಶ್ವರ, ಪ್ರತ್ಯಂಗಿರ
(ಮೂರೂ ಯಂತ್ರಗಳನ್ನು ಒಂದೆಡೆಯಿಟ್ಟಲ್ಲಿ ನವಗ್ರಹದೋಷ ನಿವಾರಣೆ, ಶತ್ರು ಪ್ರಭಾವ ನಾಶ, ಸಂತಸ ಸುಖ, ಹೆಚ್ಚುವುದು)
16×48 cm ರೂ. 1650–00
8 × 24 cm ರೂ. 450–00

8. ರಸಮಣಿ, ಪ್ರತಿಯೊಂದೂ ರೂ 250/–, ರೂ 350/–,
ರೂ 500–00
(ಏಕಾಗ್ರತೆಗೆ ಮೋಹದಕಾರಿ, ಆರೋಗ್ಯವರ್ಧಕ, ಜರಾನಿರೋಧಕ)

9. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ,
(ಅಪಘಾತ, ಶತ್ರುಗಳಿಂದ ರಕ್ಷಣೆಗೆ) ರೂ 65–00

10. ಕಾಮಾಕ್ಷಿ ಶ್ರೀಚಕ್ರ ಪದಕ ರೂ 65–00
(ಯಶಸ್ಸು, ಸಂಪತ್ತು, ಅಭಿವೃದ್ಧಿಗಳಿಗೆ)

11. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65–00
(ಅಭೀಷ್ಟ ಸಿದ್ಧಿಗಾಗಿ)

12. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00
(ಸುಖೀ ದಾಂಪತ್ಯ, ಪತಿ ಆಯುಷ್ಯಕ್ಕೆ)

13. ವಿವಾಹಪ್ರಾಪ್ತಿ ಪದಕ ರೂ. 65–00
(ಶೀಘ್ರ ವಿವಾಹಕ್ಕಾಗಿ)

14. ಶ್ರೀಚಕ್ರಂ–ಲಕ್ಷ್ಮಿ ಬೀಜದೊಡನೆ ರೂ. 65–00
(ಅಂಬಾಳ್ ಅನುಗ್ರಹಕ್ಕಾಗಿ)

15. ದೃಷ್ಟಿನಿವೃತ್ತಿ ಯಂತ್ರ ರೂ. 65–00
(ಮನೆಯಲ್ಲಿ ವ್ಯವಹಾರದ ಸ್ಥಳದಲ್ಲಿ ಚೌಕಟ್ಟು ಹಾಕಿಡುವುದು)

16. ದತ್ತಾತ್ರೇಯ ಯಂತ್ರ 12×12 cm ರೂ. 150–00
(ಕೆಟ್ಟಕಣ್ಣು ದೋಷ ಪರಿಹಾರಕ್ಕೆ)

17. ರುದ್ರಾಕ್ಷಮಾಲೆ, ತುಲಸೀಮಾಲೆ, ಸ್ಫಟಿಕಮಾಲೆ, ವಿದ್ಯುದೀಕೃತ ತಾಮ್ರದಕಡಗ,

18. ಶ್ರೀ ಭುವನೇಶ್ವರೀ ದೇವಿ ಚಿತ್ರ 30 × 20 cm ರೂ. 20–00

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು ದೇವಾಲಯಗಳಿಗೆ ಗೃಹ ಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ 105/– ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ ಕ್ಯಾಟಲಾಗ್ ಉಚಿತ, ವಿದೇಶೀ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು



**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

ಮನೆ ಮನೆ ಅಗ್ನಿಹೋತ್ರ ಗಳಿರುವಾ ।
ಸನಿದಲ್ಲಿ ವೇದ ಘೋಷಗಳು ।
ಅನುದಿನ ಮದ್ಯ ಸುರಾಪಾನದಲಿ ।
ಘನಶಾಸ್ತ್ರಚರ್ಚೆಗಳ ಮಾಡುತ ।
ಜನದೊಳು ಬ್ರಹ್ಮಜ್ಞಾನಿಗಳಾ ವೆಂ ।
ದನುಭವ ನುಡಿಗಳ ದೋರಿಸುತಾ ॥

ಇರ್ದರಾ — ಜನಸಮೂಹವ ನೋಡಿ ಹನುಮನಕ್ಕನು, ನಿಜವಾದ ಕಪಿಚೇಷ್ಟೆಗಳನ್ನು ಪ್ರಾರಂಭಿಸಿದನು.

ಬರುವ ದಾರಿಯೊಳು ಆನೆಯ ಬಾಲವಹಿಡಿದು ಹಿಂದಕೆಳೆಯುವನು. ರಥಗಳನ್ನು ಒಂದರ ಮೇಲೊಂದು ಒಗೆಯುವನು. ಕುದುರೆಗಳನ್ನು ವಿಚಿತ್ರರೀತಿಯಲ್ಲಿ ಏರುವನು. ಖಳರನ್ನು ಎತ್ತಿ ಬಡಿಯುವನು. ಇದಾವ ದೈವಕ್ಷೋಭವೋ ! ರಾವಣಾಸುರನ ಪುಣ್ಯತೀರಿತು—ಎಂದು ಜನರು ಅನ್ನುತ್ತಿದರು

ಸೀತಾದೇವಿಯ ಸುದ್ದಿ ತಿಳಿಯುವವರೆಗೆ ಆತನ ಮನಸ್ಸಿಗೆ ಸಮಾಧಾನವಿಲ್ಲ. ಹನುಮನು ಹೊಳೆಯ ತೀರದಲ್ಲಿ ಕುಳಿತನು ಬಾಲದ ಸಹಾಯದಿಂದ ಹೆಂಗಳೆಯರು ಹೊತ್ತಿರುವ ಕೊಡಗಳನ್ನು ಕೆಡವಿದನು. ಇದೇನು ಮಾಟವೋ ! ಉತ್ಪಾತವೊ ! ಎಂದು ಅವರು ಗಾಬರಿಯಾಗಿ ಓಡಹತ್ತಿದರು. "ರಾವಣನು ಸೀತೆಯನ್ನು ಅಶೋಕವನದಲ್ಲಿ ಇಟ್ಟಿದ್ದರಿಂದ ಶಿವನು ಕೋಪಿಸಿರುವನು. ಅದರಫಲವಿದು," ಎಂದು ಮಾತನಾಡಹತ್ತಿದರು. ತಾನು ಬಯಸುತ್ತಿರುವ ವರ್ತಮಾನವನ್ನು ತಿಳಿದು ಹನುಮಂತನು ಸಂತೋಷಪಟ್ಟನು. ಸೂರ್ಯಾಸ್ತವಾಯಿತು. ಲಂಕಾನಗರಿಯ ಸೌಂದರ್ಯವನ್ನು ನೋಡುವೆನೆಂದು ಪುರದೊಳಗೆ ಸಾಗಿದನು, ದಾರಿಯಲ್ಲಿ ನಾನಾಕಾರದ ಅಂಗಡಿಗಳನ್ನು ಉಪ್ಪರಿಗೆ ಮನೆಗಳ ಶೃಂಗಾರವನ್ನು ನೋಡುತ್ತ ರಾವಣನ ಸಭಾ ಮಂಟಪಕ್ಕೆ ಬಂದನು.

ಶಂಖ ತೊಲೆಯ ಗೋಡೆಗಳೆಲ್ಲವೆ, ರ ।
ತ್ನಾಂಬುಧಿಯಂದದಿ ತೋರುತಲಿ ।
ಎಂಬತ್ತು ನಾಲ್ಕದ ಗಾವುದ ಮಂಟಪ ।
ತುಂಬಿದ ಮಾನ್ಯರಾ ಸಭೆ ಕಂಡಾ ॥

ಹನುಮಂತನು ರಾವಣನನ್ನು ರೋಷದಿಂದ ನೋಡುತ್ತಿರುವಾಗ ಕೈದೀಪಗಳು ಪಟಪಟ ನಂದಿದವು. ಹನುಮಂತನ ಬಾಲವು ಎಲ್ಲರ ವಸ್ತ್ರಗ್ರಹಣ ಮಾಡಲು ಅವರು ಬತ್ತಲೆಯಾಗಿ ಕತ್ತಲಲ್ಲಿ ಓಡಾಡಿದರು. ಹನುಮನು 'ಜಯರಾಮ' ಎಂದುಗರ್ಜಿಸಿ, ರಾವಣನನ್ನು ಗುದ್ದಿ, ಸಿಂಹಾಸನದಿಂದ ಕಳಗೆ ಕೆಡವಿ ಹೊರಗೆ ಬಂದನು.

ಜನನಿಯಾ ಅರಸುತ ನಡೆದಾ ಮುಂದ
ಹನುಮ ಕಂಡನು
ಕುಂಭಕರ್ಣನ ಮನೆ ದೂರಿಂದ ॥

ವಿಸ್ತಾರವಾದ ಮಂಚದಮೇಲೆ ಕುಂಭಕರ್ಣನು ನಿಶ್ಚಿಂತೆಯಿಂದ ಮಲಗಿದ್ದನು. ರಕ್ಕಸನ ಉಸಿರಾಟದಲ್ಲಿ ಹೊಯ್ದಾಡುತ್ತ ಹನುಮನು ಕುಂಭಕರ್ಣನ ಭ್ರೂಮಧ್ಯವನ್ನು ಚಿವುಟಿದನು; ಅಸುರನು ಸೀತನು. ಹನುಮಂತನು ಬೀಳುತೇಳುತ್ತ ರಾವಣ ಶಯ್ಯಾಗಾರವನ್ನು ಹೊಕ್ಕನು ರಾವಣನ ಮಗ್ಗುಲಲ್ಲಿ ಮಲಗಿದ ಸುಂದರಿಯನ್ನು ಕಂಡು ಉಗ್ರನಾದನು ಇವಳು ಸೀತೆಯಾಗಿರಬಹುದೇ? ಎಂಬ ಸಂಶಯ ಬಂದಿತು, ತತ್‌ಕ್ಷಣ ಇದು ಸಾಧ್ಯವಿಲ್ಲ ಎಂಬ ಭಾವನೆ ಒಡಮೂಡಿತು. ಚಂದ್ರಹಾಸ ಖಡ್ಗ: ಸಾಗರಾದ ಡೋಣಿಗೆ, ಬಗಿದಾದ ಮದ್ಯಪಾತ್ರಗಳನ್ನು ನೋಡಿ ಮುಂದೆ ಸಾಗಿದನು. ಸದ್ಗುಣ ಸಂಪನ್ನನಾದ ವಿಭೀಷಣನ ಮನೆಗೆ ಬಂದನು.

ಕಂಡೆ ಆತುಕವೆಂದ ಹನುಮ । ದೈತ್ಯ ।
ತಂಡದಲಿ ವೈಷ್ಣವ ಮನಿಯ ಸಂಭ್ರಮಾ॥
ತಾಳದಂಡಿಗೆ ಮೃದಂಗದಿ ಭಾಗವತರಿಂದ ।
ಮೇಳದಲಿ ಶ್ರೀಹರಿಕಥೆಯು ಪರಿಯಿಂದ ॥

ತುಳಸಿಹಾರ, ಊರ್ಧ್ವಪುಂಡ್ರದಿಂದ, ಇವೇ ಮೊದಲಾದ ಭಾಗವತಚಿಹ್ನೆಗಳಿಂದ ಶೋಭಿಸುವ ವಿಭೀಷಣನು ಜಲಜನಾಭನದಾಸನು.

ಇವ ಪ್ರಹ್ಲಾದ ಪೂರ್ವದಲಾದ ನೆಂಬುದಾ ।
ಅವಹಿರಣ್ಯಕ, ದಶಾನನ ತಾನಾದಾ ।
ಸವರಿ ಬಿಸುಟಲು ಅಸುರ ಛಂದಾ । ಇದಕ
ದೇವನರಹರಿ ನಮ್ಮರಾಮಚಂದ್ರಾ ॥

ವಿಭೀಷಣನನ್ನು ಕಂಡ ಹನುಮನು ಉಪವನಕ್ಕಾಗಿ ಓಡಿದನು ವನಉಪವನಗಳಲ್ಲಿ ಹನುಮನು ಜಾನಕಿಯ ಅರಸಿದನು. ಅವಳು ಕಾಣದಂತಾಗಲು ತ್ರಿಕೂಟಾಚಲ ಸಹಿತ ಈ ಉಪವನವನ್ನು ಬಾಲದಿಂದ ಎತ್ತಿ ರಘುಪತಿಯ ಮುಂದೆ ಇಡುವೆನು. ಆತನೇ ಅವಳನ್ನು ಕಂಡುಹಿಡಿಯಲಿ, ಎಂದು ನಿರ್ಧರಿಸಿ ಮೌನವಾಗಿ ಬಾಲವನ್ನು ಹಂಬಿಟ್ಟನು. ಇದನ್ನು ತಿಳಿದ ಮೂಲಮಾರುತಿಯು ಪ್ರಕಟನಾಗಿ ಅಶೋಕವನದ ದಾರಿ ತೋರಿಸಿದನು.

ಅಶೋಕವನವನ್ನು ಪೊಕ್ಕು ಒಂದು ಮರದ ಕೊಂಬೆಯನ್ನೇರಿ ಕುಳಿತು ಹನುಮನು ಜಾನಕಿಯನ್ನು ಸಂಭ್ರಮದಿಂದ ಕಂಡನು. ಅದೇವೇಳೆಯಲ್ಲಿ ರಾವಣನು ತನ್ನ ವೈಭವದೊಂದಿಗೆ ಅಲ್ಲಿಗೆ ಬಂದನು ಸೀತಾದೇವಿಯೊಡನೆ ಸಯುಕ್ತಿಯ ಮಾತುಗಳನ್ನಾಡಲು ಹವಣಿಸಿದನು. ಅವನನ್ನು ತೃಣಸಮಾನವೆಂದು ಬಗೆದು ಸೀತಾದೇವಿಯ ಮಾತನಾಡಲಿಲ್ಲ. ಅಸುರನಾದ ರಾವಣನನ್ನು ಧಿಕ್ಕರಿಸಿದಳು ಅಷ್ಟರಲ್ಲಿ ಮಂಡೋದರಿಯು ಅಲ್ಲಿಗೆ ಬಂದಳು. —ಶ್ರೀದೇವಿಯ ಕೂಡ ಸೆಣಸುವರೇ? — ಎಂದು ಹೇಳಿ ರಾವಣನನ್ನು ಅರಮನೆಗೆ ಕರೆದುಕೊಂಡು ಹೋದಳು. ಇತ್ತ ವಾನರ ಪ್ರಮುಖನಾದ ಹನುಮಂತನು ಅಶೋಕ ಮರದ ಮೇಲೆ ಕುಳಿತಿದ್ದನು. ತ್ರಿಜಟೆಯೆಂಬ ಆಪ್ತಸ್ನೇಹಿತೆಯು ಬಂದು ಸೀತಾದೇವಿಗೆ ಕಪಿಯು ಪ್ರವೇಶ ಮಾಡಿ ಅಶೋಕವನವನ್ನು ಹಾಳು ಮಾಡಿದ, ಲಂಕಾಪಟ್ಟಣವನ್ನು ದಹಿಸಿದ ಕನಸಿನವೃತ್ತಾಂತವನ್ನು ತಿಳಿಸಿದಳು. ಭವಿಷ್ಯಸೂಚನೆಯನ್ನು ಕೇಳಿ ಸಂತೋಷಗೊಂಡ ಸೀತಾದೇವಿಯು ಮಲಗಲು ಸಿದ್ಧಳಾದಳು. ಆಗ "ಲೋಲಲೋಚನೆ, ಹರಿಪದವು ಸಕ್ಷೆಮವು" ( ಶ್ರೀರಾಮನು ಸಖಿಯಾಗಿರುವನು ) ಎಂಬ ಅಗೋಚರ ನುಡಿಕೇಳಿಸಿತು; ರಾಮಮುದ್ರಿಕೆ ಅವಳ ಕೈಗೆ ಬಂದಿತು.

ಸೀತಾದೇವಿಯು ರಾಮನ ಉಂಗುರವನ್ನು ತನ್ನ ಆಪ್ತ ಸಖಿಯೆಂದು ಭಾವಿಸಿ ಅದರೊಡನೆ ಸ್ನೇಹದಿಂದ ಮಾಡಿದ ಸಂವಾದ ನಿಜವಾಗಿಯೂ ಸುಂದರವಾಗಿದೆ ಇಲ್ಲಿ ಉಂಗುರವು ಮಾತನಾಡಬಹುದೇ? ಎಂಬ ಪ್ರಶ್ನೆಬಂದಾಗ ಕಾಮಾರ್ತಾಹಿ ಪ್ರಕೃತಿ ಕೃಪಣಾ ಚೇತನಾಚೇತನೇಷು ಎಂಬ ಕಾಲಿದಾಸೋಕ್ತಿಯನ್ನು ಲಕ್ಷಿಸಬೇಕು.

ಮಾತನಾಡೆಲೆಜಾಣೆ ಮುದ್ರಿನೀ ಸುಜ್ಞಾನೆ ॥
ಭೂತಳದೊಳು ರಘುನಾಥನಗಲಿಬಂದೀ ।
ಏನುಕಾರಣ ಹೇಳೆ ಸಖಿಯೇ ॥
ಎಡಭಾಗದಲಿ ನಾನು । ಬಲಭಾಗದಲಿನೀನು।
ಬಿಡದಿಕ್ಕ ತಂಗೇರಾ ಸುಖದಲ್ಲಿದೆವು

— ಎಂದುಹೇಳುತ್ತ, ರಾಮಲಕ್ಷ್ಮಣರು ಏಕೆಬರಲಿಲ್ಲ ? ಎಂಬ ಕುತೂಹಲದಿಂದ

ಪೊಡವಿಲ್ಯಾತಕೆ ನಿನ್ನ ಬಿಟ್ಟನೇ ರಘುರನ್ನಾ ।
ತಡೆಯದುಸುರು ನಿರ್ಮಮ ಸಮಾಧಿಯು ।
ಯೋಗಬೆರೆತನೇಸಖಿಯೇ ?
ಒಂದು ವಾನರಬರಲಿ । ಲಂಕೆಯಾ ದಹಿಸಲ್ಲಿ ।
ಬಂದು ಕೊಡುವ ಸಂತಸ ॥
ಬಳಕಗರಿ ಸೇರಿಸೀ ಜಲಧಿಯಲಿ।
ಎಂಬ ಆ ವಾಲ್ಮೀಕಿನುಡಿ ಬಂಜೆಯಾಯಿತೆ ॥

ಹನುಮನು ಇದನ್ನು ತಟಸ್ಥನಾಗಿ ಕೇಳಿಕೊಂಡು 'ಧನ್ಯಹರಿಭಕುತಿ' ಎಂದು ಹೇಳುತ್ತ ಸಾಷ್ಟಾಂಗದಲಿ, ನಮಿಸುತ್ತ, ಕರದ್ವಂದಮುಗಿದು ನಿಂತನು. ಆಗ ಸೀತಾದೇವಿಯು ಹನುಮನ ಪರಿಚಯ ಕೇಳುತ್ತಾಳೆ.

ಅವದೇಶದಿಂದ ಬಂದ್ಯೋ ವಾನರೇಶನೇ ।
ಆವ ಸ್ಥಳದಲ್ಲಿ ದೊರಕಿತೊ ಮುದ್ರೆಯು ।
ಆರಮಗನೋ ನಿನ್ನ ಹೆಸರವೇನೋ ।
ಆರುಕಳುಹಿದರೋ ನಿನ್ನ ನಿಲ್ಲಿಗೆ ॥
ಬಿಲ್ಲುಗಾರರಾದ ರಾಮ ಲಕ್ಷ್ಮಣರಿನ್ನು ।
ಎಲ್ಲಿಹರವರೀಗ ಹೇಳೈಯಾ ನೀನು ॥

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ಇದಕ್ಕೆ ಮಾರುತಿಯು ಉತ್ತರಿಸುತ್ತಾನೆ. ನಾನು ಮರುತನಂದನ, ರಾಮಚಂದ್ರನದಾಸ, ಕರೆವರೆನಗೆ ಹನುಮನೆಂದು, ನಿಮ್ಮ ಸುದ್ದಿಯ ನೆಲೆಯು ತಿಳಿಯಲು ರಘುನಾಥನು ಎನ್ನನಟ್ಟಿದನು. ತನ್ನ ಖೂನಗೋಸುಗ ಮುದ್ರಿಕೆಕೊಟ್ಟನು. ನಿಮ್ಮ ಕುರುಹು ಕೊಟ್ಟರೆ ಕೊಂಡೊಯ್ವೆನು ಎಂದನು.

"ಜನನಿ, ಹಸಿದಿಹೆ, ಹಣ್ಣುಗಳನು ತರಲೆ ಅಪ್ಪಣೆಕೊಡು", ಎನಲು ಸೀತಾದೇವಿಯು ಇಲ್ಲಿ ರಾಕ್ಷಸರು ಬಹಳ – ಅಂದಳು. ಅವರಿಗೆ ಅಂಜುವ ಮಗನಾನಲ್ಲ ! ಎಂದು ಹನುಮಂತನು ಉತ್ತರಿಸಿ ಅಶೋಕವನಕೆ ತೆರಳಿದನು. ಬಾಲದಿಂದ ಗಿಡಗಳಲ್ಲಿಯ ಹಣ್ಣುಗಳನ್ನು ಉದುರಿಸಿ, ವನವನ್ನು ಹಾಳುಮಾಡುತ್ತಿರುವಾಗ ಹಿಡಿ, ಕೊಲ್ಲು, ಕುಟ್ಟು, ಎಂದು ದೈತ್ಯರು ಹಿಂಬಾಲಿಸಿದರು. ಐದು ಸಾವಿರ ದೈತ್ಯರನ್ನು ಒಂದೇ ಸಿವುಡಿನಲ್ಲಿ ಕಟ್ಟಿ, ಸಾಗರದ ಮಧ್ಯದಲ್ಲಿ ಬಿಟ್ಟನು. ಎದುರಾದ ಅಕ್ಷಯಕುಮಾರನನ್ನು ಸೋಲಿಸಿದನು. ಬ್ರಹ್ಮನಿಂದ ವಿಜಯಶಕುನ ಕೇಳಿ ಇಂದ್ರಜಿತು ಹನುಮನೊಡನೆ ಯುದ್ಧಕ್ಕೆ ಬಂದನು. ಅಸುರನರಥವನು ಬಾಲದ ಕೊನೆಯಲಿ ಒತ್ತಿ ವಸುಧೆಗಪ್ಪಳಿಸಿದನು. ದಾನವೇಂದ್ರನ ಉಲ್ಲಾಸವಡಗಿತು; ಬ್ರಹ್ಮನ ನೆನೆದನು, ಹನುಮನಿಗೆ ಬ್ರಹ್ಮಾಸ್ತ್ರ ಬಿಡಲು, ಆತನು ಬಂಧನಕ್ಕೊಳಗಾದನು. ಹನುಮನನ್ನು ರಾವಣನಿಗೆ ತಂದು ಒಪ್ಪಿಸಿದರು. ಬಾಲದಲಿ ಹನುಮನ ಮರ್ಮವಿದೆಯೆಂದರಿತು ಅದಕ್ಕೆ ಉರಿ ಹಚ್ಚುವದಕ್ಕಾಗಿ ವಸ್ತ್ರಗಳನ್ನು ಸುತ್ತ ಸುತ್ತಿದರು ಅರಮನೆ ಪುರಮನೆ ವಸ್ತ್ರಗಳು ಸಾಲದಂತಾಗಲು ಸೀತಾದೇವಿಯ ವಸ್ತ್ರಗಳನ್ನು ತರಲು ಅಪ್ಪಣೆಯಾಯಿತು. ಆಗ ಹನುಮಂತನು ತನ್ನ ಬಾಲವನ್ನು ಉಡುಗಿಸಿದನು. ಅದಕ್ಕೆ ತೈಲಸುರುವಿ ಉರಿ ಹಚ್ಚಲು ಅಗ್ನಿಯು ಪುಟವಾಗಲೊಲ್ಲದು ರಾವಣನು ಬಂದು ಊದಲು ಪ್ರಾರಂಭಿಸಲು ಆತನ ಗಡ್ಡ ಮೀಸೆಗಳು ಸುಟ್ಟವು; ನಗೆಗೀಡಾಯಿತು. ಬಾಲಕ್ಕೆ ಹತ್ತಿದ ಉರಿಯಿಂದ ಹನುಮಂತನು ಲಂಕಾಪುರವನ್ನೇ ಸುಟ್ಟನು. ಆದರೆ ಭಕ್ತ ವಿಭೀಷಣನ ಮನೆಯನ್ನು ಮಾತ್ರ ಉಳಿಸಿದನು. ಉರಿಯುತ್ತಿರುವ ಬಾಲವನ್ನು ವಾರಿಧಿಯೊಳು ಅದ್ದಲು ವರುಣನು ಅನುಕೂಲ ತೆರೆಗಳಿಂದ ಕಾವನ್ನು ಆರಿಸಿದನು.

ಹನುಮನು ಸೀತಾದೇವಿಯ ಪಾದಕಮಲಗಳಿಗೆ ನಮಿಸಿ ಕರುಣದಿ ಆಜ್ಞೆಯ ಬೇಡಿದನು. ಆಗ ಸೀತಾದೇವಿಯು ತನ್ನ ಆಭರಣವನ್ನು ಗುರುತಿಗಾಗಿ ಕೊಟ್ಟಳು. ಅದನ್ನು ಭಕ್ತಿಯಿಂದ ಸ್ವೀಕರಿಸಿ ಉಪವನಕ್ಕೆ ಬಂದನು. ಮನದಲ್ಲಿ ಬ್ರಹ್ಮನನ್ನು ಧ್ಯಾನಿಸಿದನು; ಬ್ರಹ್ಮನು ಧಾನಗೋಚರನಾದನು ಅವನ ಪ್ರಾರ್ಥನೆಯಂತೆ, ಸೀತೆಯು ಸಮಾಚಾರವನ್ನರುಹುವ ಪತ್ರವನ್ನು ಬರೆದು ಕೊಟ್ಟನು. ಸಂತುಷ್ಟನಾದ ಹನುಮಂತನು ಆಕಾಶಕ್ಕೆ ಹಾರಿದನು. ವಾನರಮುಖ್ಯರು ಆತನ ಗೆಲುವಿನ ಮುಖವನ್ನು ಕಂಡು ಕಾರ್ಯಸಿದ್ಧಿಯಾಗಿದೆ ಎಂದು ಅರಿತು ಕೊಂಡರು.

ಶ್ರೀರಾಮನು ಅವನನ್ನು ಅಂತಃಕರಣದೃಷ್ಟಿಯಿಂದ ಕಂಡು ಕೈಸನ್ನೆಯಿಂದ ಸೀತಾವೃತ್ತಾಂತವನ್ನು ಕೇಳುವನು

ಆಗ ಹನುಮಂತನು,

"ಜನನಿಯ ಪಾದವಕಂಡೆನು ಕುಶಲದಿ ವನದೊಳಗಿಪ್ಪಳು ತವಚರಣಾ ಅನುದಿನ ಧ್ಯಾನವ ಮಾಡುತ ನಾಲಿಗಿ ರಾಮೆಂಬುಚ್ಚರಣಾ। ತನು ಕೃಶವಾಗಿಹಳು, ಝಳಕೊಡ್ಡಿದ ಬಳ್ಳಿಯಂತೆ ಬಾಡಿಹಳು॥" ಎಂದು ಅವಳ ಸ್ಥಿತಿಯನ್ನು ಹೇಳಿದನು. ನಾನು ಗುರುತಿನ ಉಂಗುರ ಒಯ್ದು ಕೊಟ್ಟಾಗ ಸಂಗಸುಖಿಯೇ ಬಾಯಿತ್ತು – ಎಂದು ಪ್ರೀತಿಯಿಂದ ಕರೆದಳು; ಅದನ್ನು ಅಪ್ಪಿದಳು; ಆಗ ನಾನು ರಘುಪುಂಗವನಿಗೆ ಸುಕ್ಷೇಮವು. ಎಂದು ಹೇಳದೆ ಅವಳು ಹರುಷಬಟ್ಟು ತಡೆಯದೆ ಆಭರಣವ ಕೈಯಲಿ ಕೊಟ್ಟಳು. ಇದೇ ಅವಳ ಚೂಡಾಮಣಿಯೆಂದು ಒಪ್ಪಿಸಿದನು ಬ್ರಹ್ಮನು ಬಂದು ಪತ್ರವನ್ನು ವಾಚಿಸಿದನು. ಕಪಿವೃಂದ ಸಂತೋಷ ಪಟ್ಟಿತು. ಹನುಮನ ಸೇವೆಗೆ ಶ್ರೀರಾಮಚಂದ್ರನು ಸಂತೋಷಪಟ್ಟು, ಆತನ ಶಿರದಲ್ಲಿ ಕರವವನಿಡುತ, ಪಾಪಮೋಕ್ಷಪದವ (ಬ್ರಹ್ಮಪದವ) ಕೊಟ್ಟನು. ಇದನ್ನೇ ಶ್ರೀಮದಾಚಾರ್ಯರು ತನ್ನನೇ ತಾನು ಕೊಡಬೇಕೆಂದು ರಾಮನು ನಿಶ್ಚಯಿಸಿದನು. ಎಂದಿದ್ದಾರೆ

ಸುಂದರೇ ಸುಂದರಸ್ತೋತ್ರಯಂ – ಎನ್ನುವಂತೆ ಸುಂದರಕಾಂಡದ ಕಥಾವಸ್ತು ಸುಂದರ, ಅಗಲಿದ ದುಃಖದಲ್ಲಿದ್ದ ಶ್ರೀರಾಮ ಸೀತೆಯರಿಗೆ ಪ್ರಿಯವಾರ್ತೆಯ ಸಂಧಾನ, ಮುದ್ರಿಕೆ ಆಭರಣಗಳ ವಿನಿಮಯ। ಅದರಲ್ಲಿಯೂ ಪರಸ್ಪರ ಮಾನಸಿಕ ಸಮಾಗಮವನ್ನುಂಟು ಮಾಡಿದ ಆಂಜನೇಯನ ದೌತ್ಯಕಾರ್ಯವು ಸುಂದರವಾಗಿದೆ. ಸದ್ಗುಣಗಳ ನಿಧಿಯಾದ ಹನುಮಂತನು ಅಂತರಿಕವಾಗಿ ಸುಂದರನು. ಹೀಗೆ ಸರ್ವಸುಂದರವಾದ ಈ ಕಾಂಡಕ್ಕೆ ಸುಂದರಕಾಂಡವೆಂಬ ಹೆಸರು ಸಾರ್ಥಕವಾಗಿದೆ.

ಶ್ರೀ ಸೀತಾಪತಯೇ ನಮಃ
ರಾಮಾಯ ರಾಮಭದ್ರಾಯ
ರಾಮಚಂದ್ರಾಯ ವೇಧಸೇ ।
ರಘುನಾಥಾಯ ಸೀತಾಯಾಃ ಪತಯೇ ನಮಃ॥



# ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು 31—5—88

ತಿ. ತಿ. ದೇವಸ್ಥಾನಗಳು ಧಾರ್ಮಿಕ ಸಾಹಿತ್ಯ ಸಂಗೀತ ಪ್ರಸಾರದಲ್ಲಿ ತಯಾರಿಸಿದ ಸಂಗೀತದ ಕ್ಯಾಸೆಟ್‌ಗಳನ್ನು ಐದು, ವರ್ಷಕಾಲ ಮಾರಾಟ ಮಾಡಲು ಮದರಾಸಿನ ಮಾಸ್ಟರ್ ರೆಕಾರ್ಡಿಂಗ್ ಕಂಪನಿ (ಸಂಗೀತಾ) ಅವರೊಂದಿಗೆ ಹೊಂದಿದ್ದ ಒಪ್ಪಂದವನ್ನು 30-6-88 ರ ಹೊತ್ತಿಗೆ, ಕೊನೆಗೊಳಿಸಿ, ಇನ್ನು ಮುಂದೆ ತಿ. ತಿ. ದೇ. ಗಳ ಕಲ್ಯಾಣಮಂಟಪ, ವಿಚಾರಣಾಕೇಂದ್ರಗಳು, ಪುಸ್ತಕದಂಗಡಿಗಳಲ್ಲಿ ಮಾತ್ರವೇ ಮಾರಾಟ ಮಾಡಬೇಕೆಂದು ತೀರ್ಮಾನಿಸಲಾಯಿತು.

ತಿರುಮಲೆಯಲ್ಲಿ ನಾರಾಯಣಗಿರಿಯ ಬಳಿ ಎರಡು ಎಕರೆ ಜಮೀನನ್ನು ವರ್ಷಕ್ಕೆ ರೂ 1250 ರಂತೆ 30 ವರ್ಷಕಾಲ ದೂರದರ್ಶನದ ಹೆಚ್. ಪಿ. ಟ್ರಾನ್ಸ್‌ಮಿಟಿಂಗ್ ಕೇಂದ್ರಕ್ಕಾಗಿ ಗುತ್ತಿಗೆಗೆ ನೀಡಲು ತೀರ್ಮಾನಿಸಲಾಯಿತು.

* ಕೋಲಾರದ ಬಂಗಾರು ತಿರುಪತಿಯಲ್ಲಿ ತಿ. ತಿ. ದೇ. ಕಲ್ಯಾಣಮಂಟಪದ ನಿರ್ಮಾಣವನ್ನು ವಿಶೇಷ ಸಂದರ್ಭವೆಂಬಂತೆ 50% ಸ್ಥಳೀಯ ವಂತಿಗೆಯಿಂದ ಕೈಗೆತ್ತಿಕೊಳ್ಳಲು ತೀರ್ಮಾನಿಸಲಾಯಿತು.

* ಮೇದಕ್ ಜಿಲ್ಲೆಯ ಸಿದ್ದಿಪೇಟೆಯ ತಿ.ತಿ.ದೇ. ಕಲ್ಯಾಣಮಂಟಪ ನಿರ್ಮಾಣಕಾರ್ಯವು 1989-90 ರ ವರ್ಷದಲ್ಲಿ ಆಗಬೇಕೆಂದು ತೀರ್ಮಾನಿಸಲಾಯಿತು.

* ಮದರಾಸಿನ ಟಿ. ನಗರದಲ್ಲಿನ ಹಳೆಯ ವಿಚಾರಣಾಕೇಂದ್ರದ ಸ್ಥಳದಲ್ಲಿ ಹೊಸದಾಗಿ ವಿಚಾರಣಾಕೇಂದ್ರ ಹಾಗೂ ಕ್ಯಾಂಪ ಆಫೀಸ್‌ಗಳನ್ನು 33 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಯಿತು.

* ತಿರುಮಲೆಯ ಎರಡನೇ ಘಾಟ್ ರಸ್ತೆಯಲ್ಲಿ 5 ನೀರಿನ ಅಣೆಕಟ್ಟೆಗಳನ್ನು ಕಟ್ಟಲು 5.46 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಆಂಧ್ರಪ್ರದೇಶದ ನೀರಾವರೀ ಇಲಾಖೆಗೆ ಕೆಲಸವನ್ನು ಒಪ್ಪಿಸಲು ತೀರ್ಮಾನಿಸಲಾಯಿತು.

* ನವದೆಹಲಿಯ ಶ್ರೀ ವೆಂಕಟೇಶ್ವರ ಕಾಲೇಜಿನಲ್ಲಿ ಸೋಷಿಯಾಲಜಿ (ಆನರ್ಸ್) ಕೋರ್ಸ್‌ನ್ನು ಆರಂಭಿಸಿರುವುದನ್ನು ಅನುಮೋದಿಸಿ, ಮುಂದಿನ ಶಿಕ್ಷಣ ವರ್ಷದಲ್ಲಿ ಕರ್ನಾಟಕ ಸಂಗೀತ ಶಿಕ್ಷಣವನ್ನು ಪ್ರವೇಶಗೊಳಿಸಲು ತೀರ್ಮಾನಿಸಲಾಯಿತು.

* ಆಂಧ್ರಪ್ರದೇಶದ ದೇವಾಲಯಗಳಲ್ಲಿ ತಿ. ತಿ. ದೇ. ಮೇಳಕಾರರ ಯೋಜನೆಯನ್ನು ನೀಡುತ್ತಿದ್ದ ಸಂಭಾವನೆಯನ್ನು 50% : 50% (ಸ್ಥಳೀಯ ದೇವಾಲಯಗಳ ವಂತಿಗೆ) ರೂ 400 ರಿಂದ ರೂ 600 ಕ್ಕೆ ಹೆಚ್ಚಿಸಲು ತೀರ್ಮಾನಿಸಲಾಯಿತು.

* ತಿ. ತಿ. ದೇ, ಪಂಚಾಂಗ ಪುಸ್ತಕವನ್ನು ಎಲ್ಲ ತಿ. ತಿ. ದೇ. ಉದ್ಯೋಗಿಗಳಿಗೂ ಉಚಿತವಾಗಿ ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿನ ತಿ. ತಿ. ದೇ. ವಸತಿ ಸೌಲಭ್ಯದಲ್ಲಿನ ದಿನಂಪ್ರತಿ ಬಾಡಿಗೆ ದರಗಳನ್ನು ಪರಿಷ್ಕರಿಸಲು ತೀರ್ಮಾನಿಸಲಾಯಿತು.

* ತಿರುಮಲೆಯ ಆಲಯದ ಪರಕಾಮಣಿಯ 54 ಶರಾಫ್ ಉದ್ಯೋಗಿಗಳನ್ನು ಎಲ್. ಡಿ. ಸಿ. ಹಾಗೂ 4 ಯು. ಡಿ. ಸಿ ಗಳ ಉದ್ಯೋಗಗಳಿಗೆ ಬಡತಿ ನೀಡಲು ತೀರ್ಮಾನಿಸಿ ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* ತಿರುಪತಿಯ ಶ್ರೀ ಎಸ್. ವಿ. ಬಸ್‌ಸ್ಟ್ಯಾಂಡ್ ಹಾಗೂ ಎಸ್. ಪಿ. ಬಸ್‌ಸ್ಟ್ಯಾಂಡ್‌ಗಳ ಸ್ಥಳವನ್ನು ಎ. ಪಿ. ಎಸ್. ಆರ್. ಟಿ. ಸಿ. ಯವರಿಗೆ ಪರಸ್ಪರ ಆಮೋದಯೋಗ್ಯ ಬಾಡಿಗೆಯಲ್ಲಿ 20 ವರ್ಷ ಗುತ್ತಿಗೆಗೆ ನೀಡಲು ತೀರ್ಮಾನಿಸಲಾಯಿತು.

* ತಿರುಪತಿಯ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯ ಆವರಣದಲ್ಲಿ ಎಸ್. ವಿ. ಆಯುರ್ವೇದ ಕಾಲೇಜಿನ ಮೊದಲ ಹಂತದ ನಿರ್ಮಾಣಕ್ಕೆ 84 ಲಕ್ಷ ರೂ. ಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* ಹೈದರಾಬಾದಿನ ಎಸ್. ವಿ. ವಿ. ವಿ. ಎಸ್. ಕಾಲೇಜಿನ ಪ್ರಿನ್ಸಿಪಾಲ್ ಶ್ರೀ ಜಿ. ಶ್ರೀರಾಮಮೂರ್ತಿ ಅವರು ಒಂದು ವರ್ಷಕಾಲ ಅದೇ ಹುದ್ದೆಯಲ್ಲಿ ಮುಂದುವರಿಯುವಂತೆ ತೀರ್ಮಾನಿಸಲಾಯಿತು

* ಕರೀಂನಗರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣಕ್ಕೆ 30 ಲಕ್ಷ ರೂಗಳನ್ನು ನೀಡಲು ತೀರ್ಮಾನಿಸಲಾಯಿತು.

## 24-6-1988

* ಹೈದರಾಬಾದಿನ ಶ್ರೀ ಪ್ರಮೋದಕುಮಾರ್ ಅಗರವಾಲ್ ಅವರು ತಿರುಮಲೆಯಲ್ಲಿ ಯಾತ್ರಿಕ ವಸತಿ ಸೌಕರ್ಯವನ್ನೇರ್ಪಡಿಸಲು ನೀಡಿರುವ 1.2 ಲಕ್ಷ ರೂಗಳ ವಂತಿಗೆಯಲ್ಲಿ ಕಂಕುಮಿಟ್ಟ ಸ್ಥಳದಲ್ಲಿ 60×60 ಅಡಿ ಜಾಗದಲ್ಲಿ ವಸತಿಯನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* ಕಡಪದ ಶ್ರೀ ವೀರಬ್ರಹ್ಮೇಂದ್ರಸ್ವಾಮಿಯವರ ಮಿಷನ್‌ಗೆ ಧಾರ್ಮಿಕ ಕಾರ್ಯಕ್ರಮಗಳ ಆಯೋಜನೆಗಾಗಿ, ತಿ. ತಿ. ದೇ. ಗಳು ಹರಾಜಿನಲ್ಲಿ ಮಾರಾಟಮಾಡಲು ತೀರ್ಮಾನಿಸಿದ್ದ ಮೋಟಾರ್‌ವ್ಯಾನ್ ಅನ್ನು, ಅದಿರುವ ಸ್ಥಿತಿಯಲ್ಲೇ, ಉಚಿತವಾಗಿ ನೀಡಲು ತೀರ್ಮಾನಿಸಲಾಯಿತು.

* ಅನ್ನಮಾಚಾರ್ಯರ ಕೃತಿಗಳ ಪ್ರಚಾರ, ಪುನರ್ಮುದ್ರಣ, ಸಾಹಿತ್ಯ, ಸಂಗೀತ, ಭಜನೆ ಕಾರ್ಯಕ್ರಮಗಳನ್ನು ಹೆಚ್ಚುಗೊಳಿಸುವ ಯೋಜನಾ ವಿವರಗಳನ್ನು ಪರಿಶೀಲಿಸಲು ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್, ಹಾಗೂ ತಿ. ತಿ. ದೇ. ಬೋರ್ಡ್ ಸದಸ್ಯರುಗಳಾದ ಶ್ರೀ ಐ ಎಲ್. ಎನ್. ಶಾಸ್ತ್ರಿ ಮತ್ತು ಶ್ರೀ ಆನಂದ ರಾವ್ ಅವರುಗಳನ್ನು ಒಳಗೊಂಡ ಒಂದು ಸಮಿತಿಯನ್ನು ನೇಮಿಸಲು ತೀರ್ಮಾನಿಸಲಾಯಿತು

* ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ಧಾರ್ಮಿಕ ಕಾರ್ಯಕ್ರಮಗಳಿಗಾಗಿ ಅವುಗಳ ಬಾಡಿಗೆಯ ¼ ಭಾಗ ಬಾಡಿಗೆಗೆ ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿ ಲೇಪಾಕ್ಷಿ ಕರಕುಶಲ ವಸ್ತು ಮಾರಾಟ ಮಳಿಗೆಯ ಗುತ್ತಿಗೆ ಅವಧಿ 31-2-88 ಕ್ಕೆ ಮುಗಿದಿದ್ದು ಅಲ್ಲಿಂದ ಮುಂದೆ ಎರಡು ವರ್ಷಕ್ಕಾಗಿ ಗುತ್ತಿಗೆಯನ್ನು ಮುಂದುವರಿಸಿ ವರ್ಷಕ್ಕೆ ಒಮ್ಮೆ ಈಗಿರುವ ಬಾಡಿಗೆಯ ದರದ ಹತ್ತು ಶತಾಂಶ ಹೆಚ್ಚುಗೊಳಿಸಲು ತೀರ್ಮಾನಿಸಲಾಯಿತು.

* ಭಾರತೀಯ ಚಹಾ ನಿಗಮದ ತಿರುಮಲೆಯ ಟೀ ನೂಕ್ ನ ಲೈಸನ್ಸ್ ಅನ್ನು 31–3–89 ರವರೆಗೆ ವಿಸ್ತರಿಸಿ ಈಗಿರುವ ಲೈಸನ್ಸ್ ಶುಲ್ಕದ ಹತ್ತು ಶತಾಂಶ ಹೆಚ್ಚುವರಿಯನ್ನು ವಸೂಲಿ ಮಾಡಲು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿನ ಅಂಗಡಿಗಳು, ಬಂಕ್‌ಗಳು ಮೊದಲಾದವುಗಳ ಲೈಸನ್ಸ್ ಅನ್ನು ಮೂರುವರ್ಷಗಳಿಗಾಗಿ ಪುನರುದ್ಧರಿಸಿ, ಪುಶ್ತಂವಾಸಗೊಂಡವರ ಬಳಿ ಹತ್ತು ಶತಾಂಶ ಹೆಚ್ಚುವರಿ ದರಗಳನ್ನೂ, ಇತರರ ಬಳಿ 15% ಹೆಚ್ಚುವರಿ ದರಗಳನ್ನೂ ವಸೂಲಿ ಮಾಡಲು ತೀರ್ಮಾನಿಸಲಾಯಿತು.

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು. ಐ ಎ ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗನ್ನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿವೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇ ತ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಜೀವಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು)**

* ತಿರುಮಲೆಯ ಮೊದಲ ಸತ್ರದಲ್ಲಿನ ಕೋಣೆಯನ್ನು ಜಿಲ್ಲಾ ಗ್ರಂಥಾಲಯ ಸಂಸ್ಥೆಗೆ ಮತ್ತೆ ಎರಡು ವರ್ಷಗಳಕಾಲ ಹಿಂದಿನ ಬಾಡಿಗೆಯಲ್ಲೇ ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿ ತಿರುಪತಿ ಸಹಕಾರಿ ಬ್ಯಾಂಕ್‌ಗೆ ನೀಡಿದ ಕೋಣೆಗಳ ಬಾಡಿಗೆಯನ್ನು ಹತ್ತು ಶತಾಂಶ ಹೆಚ್ಚಿಸಿ ಮತ್ತೂ ಒಂದು ವರ್ಷ ಬಾಡಿಗೆಗೆ ನೀಡಲು ತೀರ್ಮಾನಿಸಲಾಯಿತು.

* ಶ್ರೀ ವೆಂಕಟೇಶ್ವರಸ್ವಾಮಿ ಪ್ರಸಾದವಾದ ಲಾಡುವಿನ ಬೆಲೆಯನ್ನು ಹೆಚ್ಚಿಸಿರುವುದರಿಂದ ಲಾಡುಪಡಿಯ ಬೆಲೆಯನ್ನೂ ತಕ್ಕಂತೆ ಹೆಚ್ಚಿಸಲು ತೀರ್ಮಾನಿಸಿ ಅದರಂತೆ ಲಾಡುಪಡಿಯ ಶುಲ್ಕವನ್ನು ರೂ700–00 ರಿಂದ ರೂ750–00 ಏರಿಸಿ. ಈ ಬದಲಾದ ದರಗಳು 1–7–88 ರಿಂದ ಜಾರಿಗೆ ಬರಬೇಕೆಂದು ತೀರ್ಮಾನಿಸಲಾಯಿತು.

* ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ನಡೆಯುವ ವಾರ್ಷಿಕ ಆನಿವರ ಆಸ್ಥಾನದ ದಿನದಂದು ಸಂಜೆ ಪುಷ್ಪ ಪಲ್ಲಕ್ಕಿ ಉತ್ಸವವನ್ನು ಅರ್ಜಿತ ಸೇವೆಯನ್ನಾಗಿ ಮಾಡಲು ತೀರ್ಮಾನಿಸಲಾಯಿತು.

* ತಿರುಪತಿ ತಿರುಮಲೆಗಳಲ್ಲಿನ ತಿ. ತಿ. ದೇ. ಶಾಲೆಗಳಲ್ಲಿನ ವಿದ್ಯಾರ್ಥಿಗಳಲ್ಲಿ ದಂತ ಪರೀಕ್ಷಾ ಶಿಬಿರವನ್ನು 11–7–88 ರಿಂದ 14–7–88 ವರೆಗೆ ನಡೆಸಲು 35000 ರೂ ಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* ತಿರುಪತಿಯಲ್ಲಿ ನಿರ್ಮಿಸಬೇಕೆಂದಿರುವ ಸೂಪರ್ ಸ್ಪೆಷಲ್ ಆಸ್ಪತ್ರೆಯ ಹವಾನಿಯಂತ್ರಣ ಕಾರ್ಯದಲ್ಲಿ ತಜ್ಞ ಸಲಹೆಯನ್ನು ಪಡೆಯಲು ತೀರ್ಮಾನಿಸಲಾಯಿತು.

* ತಿರುಮಲೆ ಹಾಗೂ ನರಸಿಂಗಾಪುರಗಳಲ್ಲಿ ಕೆಲಸಮಾಡುತ್ತಿರುವ ತಿ. ತಿ. ದೇ. ಉದ್ಯೋಗಿಗಳಿಗೆ ಇತರೆಡೆಗಳಲ್ಲಿನ ಉದ್ಯೋಗಿಗಳಿಗೆ ನೀಡುವಂತೆಯೇ ಮೂಲ ವೇತನದ 20% ಮನೆಬಾಡಿಗೆ ಭತ್ಯ ನೀಡಲು ಮನೆಬಾಡಿಗೆ ಭತ್ಯ ನಿಯಮಗಳನ್ನು ಸಡಿಲಿಸಬೇಕೆಂದು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* ತಿ.ತಿ.ದೇ. ಗಳ ಜಮೀನುಗಳ ಅಭಿವೃದ್ಧಿಗಾಗಿ ಲ್ಯಾಂಡ್ ಸರ್ವೆಯ ಅಸಿಸ್ಟೆಂಟ್ ಡೈರೆಕ್ಟರ್ – 1 ಸರ್ವೇಯರ್‌ಗಳು–2, ಚೈನ್‌ಮನ್‌ಗಳು-5. ಇವರ ತಾತ್ಕಾಲಿಕ ಹುದ್ದೆಗಳನ್ನು ಮತ್ತೆರಡು ವರ್ಷ ಮುಂದುವರಿಸಲು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* ಎಸ್. ವಿ ಯೂನಿವರ್ಸಿಟಿಗೆ 1988–89 ರ ವಾರ್ಷಿಕ ವೆಚ್ಚಗಳಿಗಾಗಿ ಹತ್ತು ಲಕ್ಷ ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

(40ನೇ ಪುಟ ನೋಡಿ)

## ಶ್ರೀ ಪದ್ಮಾವತೀ ಅಮ್ಮನವರ ಕೋಟಿಕುಂಕುಮಾರ್ಚನೆ ಆರಂಭ

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಲೋಕಕಲ್ಯಾಣಾರ್ಥವಾಗಿ ಕೋಟಿಕುಂಕುಮಾರ್ಚನೆ ಜುಲೈ 18 ರಿಂದ ಆರಂಭವಾಗಿದೆ. ದಿನವೂ ಬೆಳಗ್ಗೆ 7 ರಿಂದ 11 ಮಧ್ಯಾಹ್ನ 4 ರಿಂದ 7 ಗಂಟೆಯವರೆಗೆ 21 ದಿನಗಳ ಕಾಲ ನಡೆಯುವ ಈ ಕೋಟಿ ಕುಂಕುಮಾರ್ಚನೆಯಲ್ಲಿ ಶ್ರೀ ರಾಮಸ್ವಾಮಿಭಟ್ಟರು ಪ್ರಧಾನಋತ್ವಿಕರಾಗಿದ್ದು 3 ಮಂದಿ ಕರ್ನಾಟಕದ ಪಾಂಚರಾತ್ರಾಗಮ ವಿದ್ವಾಂಸರು ಋತ್ವಿಕರಾಗಿರುತ್ತಾರೆ ಇವರೊಂದಿಗೆ 13 ಮಂದಿ ಪರಿಚಾರಕರಿದ್ದಾರೆ. 9 ಹೋಮಕುಂಡಗಳಲ್ಲಿ ಹೋಮವೂ ದಿನಕ್ಕೆ 5 ಲಕ್ಷ ಮಂತ್ರ ಪಠನದಂತೆ ಅರ್ಚನೆಯೂ ನಡೆಯುವುದು 5000 ರೂಗಳ ಶುಲ್ಕದಿಂದ ಇಡೀ ಕುಂಕುಮಾರ್ಚನೆಯಲ್ಲಿ ಗೃಹಸ್ಥರು ಭಾಗವಹಿಸಬಹುದು. ಪ್ರತಿದಿನದ ಶುಲ್ಕ 300 ರೂ.ಗಳು ಮೊದಲದಿನ ತಿ ತಿ ದೇ. ಅಧ್ಯಕ್ಷ ಶ್ರೀ ಡಿ ಸೀತಾರಾಮಯ್ಯ ಬೋರ್ಡ್ ಸದಸ್ಯರು ಶ್ರೀ ಎಲ್ ವಿ ರಾಮಯ್ಯ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಮೊದಲಾದವರು ಭಾಗವಹಿಸಿದ್ದರು.

ಕೋಟಿ ಕುಂಕುಮಾರ್ಚನೆಯಲ್ಲಿ ಭಾರತದ ಉಪರಾಷ್ಟ್ರಪತಿ ಡಾ॥ ಶಂಕರ ದಯಾಳಶರ್ಮ ಅವರು ಜುಲೈ 21 ರಂದು ಭಾಗವಹಿಸಿದ್ದರು. ಭಾರತೀಯ ವಿಮಾನದಳದ ಹೆಲಿಕಾಪ್ಟರಿನಲ್ಲಿ ಆಗಮಿಸಿದ್ದರು. ಉಪರಾಷ್ಟ್ರಪತಿ ದಂಪತಿಗಳನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ಎಚ್ ವೆಂಕಟಪತಿರಾಜು ಮೊದಲಾದ ಅಧಿಕಾರಿಗಳು ಆಲಯ ಮರ್ಯಾದೆಗಳಂತೆ ಸ್ವಾಗತಿಸಿದರು. ಉಪರಾಷ್ಟ್ರಪತಿಗಳು ಕೋಟಿಕುಂಕುಮಾರ್ಚನೆಯಲ್ಲಿ ಪಾಲುಗೊಂಡು ತಿರುಮಲೆಗೆ ಆಗಮಿಸಿ, ಸ್ವಾಮಿಯನ್ನು ಆರಾಧಿಸಿದರು. (ಉಪರಾಷ್ಟ್ರಪತಿಗಳ ತಿರುಮಲೆ ಸಂದರ್ಶನದ ಚಿತ್ರಗಳನ್ನು ಒಳ ರಕ್ಷಾಕವಚ-1 ರಲ್ಲಿ ಕಾಣಬಹುದು)

## ಆನಿವರ ಆಸ್ಥಾನ ಪುಷ್ಪಪಲ್ಲಕ್ಕಿಯ ಉತ್ಸವ

ದಿನಾಂಕ 16-7-88 ರಂದು ಶನಿವಾರ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ವಾರ್ಷಿಕ ಆನಿವರ ಆಸ್ಥಾನವು ಯಶಸ್ವಿಯಾಗಿ ನಡೆಯಿತು. ತದಂಗವಾಗಿ ಅಂದು ಸಂಜೆ ಬಹು ಸುಂದರವಾದ ಪುಷ್ಪಪಲ್ಲಕ್ಕಿಯಲ್ಲಿ ಶ್ರೀ ಮಲೆಯಪ್ಪಸ್ವಾಮಿ ಶ್ರೀದೇವಿ ಭೂದೇವಿಯರ ಊರ ಮೆರವಣಿಗೆ ಆಹ್ಲಾದಕರವಾಗಿ ನಡೆಯಿತು. 1500 ಕಿಲೋಗ್ರಾಂಗಳಿಗೂ ಹೆಚ್ಚಿನ ತೂಕದ 20 ಬಗೆಯ ಹೂವುಗಳಿಂದ ಅಲಂಕೃತವಾದ ಪುಷ್ಪಪಲ್ಲಕ್ಕಿ ಪ್ರತಿವರ್ಷದ ಪಲ್ಲಕ್ಕಿಗಿಂತಲೂ ಹೆಚ್ಚು ಸುಂದರವಾಗಿದ್ದಿತು. ಸಾವಿರ ರೂಗಳ ಅರ್ಜಿತ ಸೇವೆಯ ಈ ಪುಷ್ಪಪಲ್ಲಕ್ಕಿ ಉತ್ಸವದಲ್ಲಿ 14 ಮಂದಿ ಗೃಹಸ್ಥರು ಅರ್ಜಿತ ಸೇವಾದಾರರಾಗಿದ್ದರು. ತಿ. ತಿ. ದೇ. ಉಪವನಾಧಿಕಾರಿ ಶ್ರೀ ತಮ್ಮಣ್ಣ ಅವರ ನೇತೃತ್ವದಲ್ಲಿ 76 ಮಂದಿ ಮಾಲೆಗಾರರು ತಮ್ಮ ಕಸುರಿಗೆಲಸದಿಂದ ಶೋಭೆಯನ್ನು ತಂದಿದ್ದರು ಉತ್ಸವದಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು, ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ವಿ. ಜಿ. ಓ ಶ್ರೀ ಎಸ್. ಕೆ. ಜಯಚಂದ್ರ, ಡೆಪ್ಯುಟಿ, ಇ. ಓ ಶ್ರೀ ಎಸ್. ಮುನಿಕೃಷ್ಣನ್ ಮೊದಲಾದ ಅಧಿಕಾರಿಗಳು ಭಾಗವಹಿಸಿದ್ದರು.

## ತಿರುಪತಿಯಲ್ಲಿ ಯಾತ್ರಿಕಾನುಕೂಲಗಳು

ತಿರುಪತಿಯಿಂದ ತಿರುಮಲೆಗೆ ಏರುವ ಬೆಟ್ಟದ ತಪ್ಪಲಿನ ಅಲಿಪಿರಿಯಲ್ಲಿ ಯಾತ್ರಿಕರಿಗೆ ಅನುಕೂಲಗಳನ್ನು ಹೆಚ್ಚಿಸಲು ವಿವಿಧ ಯೋಜನೆಗಳನ್ನು ರೂಪಿಸಲಾಗಿದೆ. ಅಲಿಪಿರಿಯ ಬಳಿ 1008 ಕೋಣೆಗಳ ಸಪ್ತಗಿರಿ ಧರ್ಮಶಾಲೆಯ ನಿರ್ಮಾಣ ಮಾಡಿ ಯಾತ್ರಿಕರಿಗೆ ಉಳಿದುಕೊಳ್ಳಲು ಅವಕಾಶ ಮಾಡಿಕೊಡಲಾಗುವುದು. ಮೊದಲ ಹಂತದಲ್ಲಿ 150 ಕೋಣೆಗಳನ್ನು ನಿರ್ಮಿಸಲಾಗುವುದು. ಇವುಗಳೊಂದಿಗೇ ಅಲ್ಲಿ ಬಸ್‌ಸ್ಟಾಂಡ್, ಕಾಟೇಜುಗಳ ನಿರ್ಮಾಣವೂ ನಡೆಯಲಿದೆ. ತಿರುಪತಿಯ ಹೊರವಲಯಗಳಲ್ಲಿ ಮೂರು ಆಕರ್ಷಕ ತೋರಣಗಳನ್ನು ನಿರ್ಮಿಸಲಾಗುವುದು. ತಿರುಪತಿಯಲ್ಲಿ ಸಾವಿರ ಮಂದಿ ಒಟ್ಟಿಗೆ ಕೂರಲು ಅವಕಾಶವಾಗುವ ಸಭಾಭವನವನ್ನು ನಿರ್ಮಿಸಲಾಗುವುದು. ತಿರುಪತಿ ಹಾಗೂ ತಿರುಮಲೆಗಳಲ್ಲಿ ನೈರ್ಮಲ್ಯ, ಆರೋಗ್ಯ ಪರಿರಕ್ಷಣೆಗಾಗಿ 8.5 ಕೋಟಿ ರೂಗಳ ವೆಚ್ಚದಲ್ಲಿ ಒಳಚರಂಡಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದು. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ವರದಿಗಾರರೊಂದಿಗೆ ಮಾತನಾಡುತ್ತ ಈ ಅಂಶಗಳನ್ನು ತಿಳಿಸಿದರೆಂದು ವರದಿಯಾಗಿದೆ.

## ಸ್ವಾಮಿಗೆ ವಾಹನಗಳ ಕಾಣಿಕೆ

ಟಿ. ವಿ. ಎಸ್. ಸಂಸ್ಥೆಯವರು ತಯಾರಿಸಿದ ಹೊಸ ಎರಡು ದ್ವಿಚಕ್ರ ವಾಹನಗಳ ಪ್ರಥಮ ಮಾದರಿಗಳನ್ನು ಶ್ರೀ ವೆಂಕಟೇಶ್ವರ ಸ್ವಾಮಿಗೆ ಅರ್ಪಿಸಿದ್ದಾರೆ. 23 ಸಾವಿರ ರೂಪಾಯಿ ಮೌಲ್ಯದ ಸುಪ್ರ- ಮೋಟಾರ್ ಸೈಕಲ್ ಹಾಗೂ ಟಿ. ವಿ. ಎಸ್. ಎಕ್ಸೆಲ್ ಮೋಪೆಡ್‌ಗಳನ್ನು ಟಿ. ವಿ ಎಸ್. ನ ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀ ವೇಣು ಶ್ರೀನಿವಾಸನ್ ಹಾಗೂ ಶ್ವೇತಾ ಎಂಟರ್‌ಪ್ರೈಸಸ್‌ನ ಜನರಲ್ ಮ್ಯಾನೇಜರ್ ಶ್ರೀ ಕೆ. ಎಸ್. ಚಂದ್ರಶೇಖರ ಅವರು ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ ಎಚ್. ವೆಂಕಟಪತಿರಾಜು ಅವರಿಗೆ ಈಚೆಗೆ ಒಪ್ಪಿಸಿದರು

## ಸ್ವಾಮಿ ಸನ್ನಿಧಿಯಲ್ಲಿ ಆಂಧ್ರಪ್ರದೇಶ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿ ಸೇವೆಯಲ್ಲಿ ಭಾಗವಹಿಸಿದ್ದರು. 25 ರೂಗಳ ಟಿಕೆಟ್ ಕೊಂಡು ವಿಶೇಷ ಪ್ರವೇಶದ ಸಾಲಿನಲ್ಲಿ ದೇವಾಲಯವನ್ನು ತಲುಪಿದ ಅವರೊಂದಿಗೆ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ತಿ. ತಿ. ದೇ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ, ಬೋರ್ಡ್ ಸದಸ್ಯ ಡಾ॥ ದೇವನಾಥನ್ ಮೊದಲಾದವರು, ಇದ್ದರು ಮುಖ್ಯ ಮಂತ್ರಿಗಳನ್ನು ಆಲಯ ಮರ್ಯಾದೆಗಳಂತೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಸ್ವಾಗತಿಸಿದರು.

ಸ್ವಾಮಿ ಸಂದರ್ಶನದನಂತರ ಮುಖ್ಯಮಂತ್ರಿಯವರಿಗೆ ರಂಗನಾಯಕ ಮಂಟಪದಲ್ಲಿ ವೇದೋಕ್ತ ಆಶೀರ್ವಾದ ಪುರಸ್ಸರವಾಗಿ ಪ್ರಸಾದ ಹಾಗೂ ಶೇಷವಸ್ತ್ರಗಳನ್ನು ನೀಡಲಾಯಿತು.

ನಂತರ ಮುಖ್ಯಮಂತ್ರಿಗಳು ತಿರುಮಲೆಯಲ್ಲಿ ನಿರ್ಮಿಸಲು ತೀರ್ಮಾನಿಸಿರುವ ಧರ್ಮ ಪ್ರಚಾರ ಪರಿಷತ್ ಭವನಕ್ಕಾಗಿ ಸ್ಥಳ ಪರಿಶೀಲನೆ ಮಾಡಿದರು. ಮೂರು ಸ್ಥಳಗಳನ್ನು ಪರಿಶೀಲಿಸಿ ತಿರುಮಲೆಯ ಭೂಗೋಳಿಕ ಶಿಲಾತೋರಣದ ಬಳಿಯ ಧರ್ಮಗಿರಿಯಲ್ಲಿನ ಸ್ಥಳದ ಆಯ್ಕೆ ಆಯಿತು. ಈ ನೆನಪಿನಲ್ಲಿ ಅಲ್ಲಿ ಒಂದು ಸಸಿಯನ್ನೂ ಅವರು ನೆಟ್ಟರು. (ಒಳರಕ್ಷಾಪುಟ-2 ರಲ್ಲಿ ಚಿತ್ರಗಳನ್ನು ನೋಡಬಹುದು.)

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ. — ಸೆಪ್ಟಂಬರ್ 1988

**ಗಣೇಶ ದರ್ಶನ**
– ವಿದ್ವಾನ್ ಬಿ. ಬಾಲಗಣಪತಿ ಭಟ್ಟ

**ಲಲಿತ ಕಲೆಗಳಲ್ಲಿ ಶ್ರೀಕೃಷ್ಣ**
ಪಿ. ಎಸ್. ಕೃಷ್ಣ ಭಟ್ಟ

**ಕನ್ನಡ ಕಾವ್ಯಗಳಲ್ಲಿ ಗಣಪತಿ**
–ಕೆ. ಜಗನ್ನಾಥ ಶಾಸ್ತ್ರಿ

**ಶ್ರೀ ಕೃಷ್ಣ ಕುಸುಮಾಂಜಲಿ**
–ಡಾ॥ ಪಿ. ಎಸ್. ಸಂಪತ್ಕುಮಾರಾಚಾರ್ಯ

**ಜನಪದ ಸಾಹಿತ್ಯದಲ್ಲಿ ಭಕ್ತಿ**
– ಸಿ. ನಂ. ಕೃಷ್ಣಮೂರ್ತಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ –

ಸಂಪಾದಕರು
ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

### ಸೆಪ್ಟಂಬರ್ 1988

| | | |
|---|---|---|
| 3. | ಶನಿವಾರ | ಶ್ರೀ ಕೃಷ್ಣ ಜಯಂತಿ. ತಿರುಮಲೆಯಲ್ಲಿ ಗೋಕುಲಾಷ್ಟಮಿ |
| 11. | ಭಾನುವಾರ | ಸೂರ್ಯಗ್ರಹಣ |
| 13. | ಮಂಗಳವಾರ | ಬಲರಾಮಜಯಂತಿ |
| 14. | ಬುಧವಾರ | ವರಾಹಜಯಂತಿ, ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ– ಧ್ವಜಾರೋಹಣ |
| 15. | ಗುರುವಾರ | ವಿನಾಯಕ ಚೌತಿ |
| 18. | ಭಾನುವಾರ | ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ –ಗರುಡೋತ್ಸವ |
| 21. | ಬುಧವಾರ | " ರಥೋತ್ಸವ |
| 22. | ಗುರುವಾರ | ವಾಮನ ಜಯಂತಿ " ಧ್ವಜಾವರೋಹಣ |
| 24. | ಶನಿವಾರ | ಅನಂತ ಪದ್ಮನಾಭವ್ರತ |

(38 ನೇ ಪುಟದಿಂದ)

* ತಿರುಪತಿಯ ವಿನಾಯಕನಗರದ ಬಳಿಯಲ್ಲಿ ಇಸ್ಕಾನ್ ಅವರಿಗೆ (ಹರೇರಾಮ ಹರೇಕೃಷ್ಣ ಮೂವ್‌ಮೆಂಟ್) ಈಗಾಗಲೇ ನೀಡಿರುವ ದೀರ್ಘಕಾಲಿಕ ಗುತ್ತಿಗೆಯ ಸ್ಥಳದ ಜೊತೆಗೆ ಅದಕ್ಕೆ ಹೊಂದಿಕೊಂಡಿರುವ 1.15 ಎಕರೆ ಸ್ಥಳವನ್ನು ದೀರ್ಘ ಕಾಲಿಕ ಗುತ್ತಿಗೆಗೆ ನೀಡಲು ತೀರ್ಮಾನಿಸಲಾಯಿತು

* ತಿ. ತಿ. ದೇ ಗಳ ರಕ್ಷಣೆ ಹಾಗೂ ನಿಗಾ ಇಲಾಖೆಯ ನಿಸ್ತಂತು ಜಾಲ ವಿಭಾಗಕ್ಕೆ 1 ಎಸ್. ಐ. ಹಾಗೂ 4 ಎಚ್. ಸಿ. ಹಾಗೂ ನಾಲ್ವರು ನಿಸ್ತಂತು ಸಂಪರ್ಕ ಕೆಲಸಗಾರರನ್ನು ಸರ್ಕಾರದಿಂದ ಬದಲಿ ವ್ಯವಸ್ಥೆಯಲ್ಲಿ ಕೆಲಸ ಮಾಡಲು ಶಿಫಾರಸುಮಾಡಬೇಕೆಂದು ತೀರ್ಮಾನಿಸಲಾಯಿತು.

* ಮಾರಿಷಸ್‌ನ ಶ್ರೀವೆಂಕಟೇಶ್ವರ ದೇವಸ್ಥಾನಂ ಟ್ರಸ್ಟ್‌ನವರಿಗೆ ವಿದೇಶೀ ದೇವಾಲಯ ನೆರವು ಯೋಜನೆಯನ್ವಯ ಭಾರತದ ರಿಸರ್ವ್‌ಬ್ಯಾಂಕ್ ಅನುಮತಿ ದೊರೆತ ನಂತರ 15 ಲಕ್ಷ ರೂಗಳ ಬಡ್ಡಿ ರಹಿತ ಸಾಲವನ್ನು ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯ ಅಶ್ವಿನಿ ಆಸ್ಪತ್ರೆಯ ಬಳಿ ತಿ. ತಿ. ದೇ. ಜೆ. ಇ. ಓ. ಅವರ ಕ್ಯಾಂಪ್ ಕಚೇರಿಯ ಕಟ್ಟಡ ನಿರ್ಮಾಣದ ಸೂಚನೆಯನ್ನು ಅನುಮೋದಿಸಲು ತೀರ್ಮಾನಿಸಲಾಯಿತು.

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಸೆಪ್ಟಂಬರ್ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

61, 64, 185, 186, 513, 1035, 1677, 1678, 1679, 1681, ರಿಂದ, 1707, 1709, ರಿಂದ 1715, 1717; 1718, 1720, ರಿಂದ 1726, 1728, 1730, 1731, 1732, 1734, ರಿಂದ 1745.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

Edited and Published on behalf of the T. T. Devasthanams by K. Subba Rao, M.A., and Printed at Press by M. Vijayakumar Reddy, Manager, T. T. D. Press, Tirupati – 517501

